ಏಪ್ರಿಲ್ 2014
ಸಂಪುಟ 15 ಸಂಚಿಕೆ 04

# ವಿವೇಕಪ್ರಭ

















**ವ್ಯವಸ್ಥಾಪಕ ಸಂಪಾದಕರು**
ಸ್ವಾಮಿ ಮುಕ್ತಿದಾನಂದ
**ಸಂಪಾದಕರು**
ಸ್ವಾಮಿ ವೀರೇಶಾನಂದ
**ನೆರವು:**
ಆರ್. ಎಸ್. ಪೂರ್ಣಾನಂದ
ಎನ್. ಎಸ್. ಶಾರದಾಪ್ರಸಾದ್
ಡಾ. ಕೆ. ಎಲ್. ಪ್ರಸನ್ನಾಕ್ಷಿ
ಡಾ. ಎಚ್. ಪಾಂಡುರಂಗ ವಿಠಲ
ನರಸಿಂಹಮೂರ್ತಿ

**ಅಕ್ಷರ ಜೋಡಣೆ**
ಶ್ರೀರಾಮಕೃಷ್ಣ ಆಶ್ರಮ, ಮೈಸೂರು
**ಮುದ್ರಣ**
ಮಯೂರ್ ಗ್ರಾಫಿಕ್ಸ್, ಬೆಂಗಳೂರು



**E-mail:**
vivekaprabha@hotmail.com
kannada.vivekaprabha@gmail.com
**Website:** vivekaprabha.net
**ಫೋನ್ :** 9481533505


**ಮುಖಪುಟ:**
ಓಂಕಾರೇಶ್ವರ ತೀರ್ಥಕ್ಷೇತ್ರದಲ್ಲಿರುವ ಓಂಕಾರೇಶ್ವರ ದೇವಸ್ಥಾನ

**ಈ ಪತ್ರಿಕೆಯ ಧ್ಯೇಯ**
ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.
– ಸ್ವಾಮಿ ವಿವೇಕಾನಂದ


**ಚಂದಾ ವಿವರ :** ಬಿಡಿ ಪ್ರತಿ: ₹ 14; ವಾರ್ಷಿಕ: ₹ 140; ಮೂರು ವರ್ಷ: ₹ 375; ಆಜೀವ (25 ವರ್ಷ): ₹ 3,000; ಪೋಷಕ ಸಹಾಯಧನ: ₹ 5,000 ಅಥವಾ ಹೆಚ್ಚು. ವಿದೇಶಗಳಿಗೆ: (ಏರ್‌ಮೇಲ್): ವಾರ್ಷಿಕ: $20; ಮೂರು ವರ್ಷ: $60; ಆಜೀವ (25 ವರ್ಷ): $300; ಪೋಷಕ ಸಹಾಯಧನ: $600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/D ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

# ಪ್ರಾರ್ಥನೆ



ಇಂದು ಎನಗೆ ಗೋವಿಂದ, ನಿನ್ನ ಪಾದಾರ
ವಿಂದವ ತೋರೋ ಮುಕುಂದನೇ

ಮಂದರೋದ್ಧಾರನೆ ನಂದಗೋಪನ ಕಂದ
ಇಂದಿರಾರಮಣ ಗೋವಿಂದ
ಗೋಕುಲಾನಂದ

ನೊಂದೆನಯ್ಯಾ ಭವ ಬಂಧನದೊಳು ಸಿಲುಕಿ
ಮುಂದೆ ದಾರಿಕಾಣದೆ, ಕುಂದಿದೆ ಜಗದೊಳು
ಕಂದ ನಾನೆಂದೆನ್ನ ಕುಂದುಗಳೆಣಿಸದೆ
ತಂದೆ ನೀ ಕಾಯೋ ಕಂದರ್ಪ ಜನಕನೇ

ಮೂಢತನದಿ ಬಲು ಹೇಡಿ ಜೀವನನಾಗಿ
ದೃಢಭಕ್ತಿಯ ಮಾಡಲಿಲ್ಲವೋ ಹರಿಯೇ
ನೋಡಲಿಲ್ಲವೊ ನಿನ್ನ, ಪಾಡಲಿಲ್ಲವೊ ಮಹಿಮೆ
ಗಾಡಿಕಾರ ಕೃಷ್ಣ ಬೇಡಿಕೊಂಬೆನೊ ಸ್ವಾಮಿ

ಧಾರುಣಿಯೊಳು ಭೂಭಾರ ಜೀವನನಾಗಿ
ಮೇರೆದಪ್ಪಿ ನಡೆದು ಸೇರಿದೆ ಕುಜನರ
ಯಾರೂ ಕಾಯುವರಿಲ್ಲ ಸೇರಿದೆ ನಿನಗಯ್ಯಾ
ಧೀರ ವೇಣುಗೋಪಾಲ ಪಾರುಗಾಣಿಸೊ ಹರಿಯೇ

– *ರಾಘವೇಂದ್ರ ಸ್ವಾಮಿಗಳು*

(ಆಧಾರ: ಬೇಲೂರು ಕೇಶವದಾಸರ *'ಕರ್ನಾಟಕ ಭಕ್ತ ವಿಜಯ'*)

## ಸೂಕ್ತಿಪ್ರಭ – ಜೀವನ ವಿಧಾನ

*(ವಿಜಯದಾಸರ ಉಗಾಭೋಗಗಳಿಂದ)*

**ಪ**ರಧನ ಪರಸತಿ ಪರನಿಂದ್ಯದವರ । ಸರಸದಲ್ಲಿರದೆ ಚರಿಸಬೇಕು ದೂರ । ನರರು ಬೈದರೆ ಆದರವೆಂದು ತಿಳಿದು। ಹರುಷಪಡಲಿಬೇಕು ನಿರುತದಲಿ ॥

**ಸು**ರತರು ದೊರೆತಂತೆ ಕರೆದು ಮನ್ನಿಸಿದರು। ಹಿರಿಹಿರಿ ಹಿಗ್ಗದೆ ಬರಡು ತಾನಿರಬೇಕು । ನೆರೆದ ಸಂದಣಿಯೊಳು ಚರಿಸಬಾರದು ಹೋಗಿ । ಬರಿದೆ ಕುಳಿತು ಹಾಳು ಹರಟೆಯನಾಡದಲೆ । ಮರಿಯಾದೆಯ ಸೊಲ್ಲು ಇರಬೇಕು ತನ್ನೊಳು । ಪರಮ ತತ್ವವ ತಿಳಿದು ದುರುಳರಿಗರುಹದೆ। ಸುರಿಯುಬೇಕು ಸುಖ ಮರಳಿ ಮರಳಿ ನೆನೆದು । ಪರಮಗುಪ್ತನಾದ ವಿಜಯವಿಠಲನ । ನೆರೆ ನಂಬಲಿಬೇಕು ಕುರುಹು ಕಾಣಿಸುವಂತೆ ॥

**ಲೇ**ಸಾದರು ಹರಿಯ ಕಾರುಣ್ಯವೆನಬೇಕು । ಲೇಸಾಗದೆ ಬಲು ಕ್ಲೇಶ ಬಂದೊದಗಲು ಏಸು ಜನ್ಮದ ಪಾಪರಾಶಿ ಬಂದೊದಗಿತೋ । ಈ ಶರೀರಕೆ ಬಂದು ಪ್ರಾಪ್ತವಾದದ್ದು ಅನುಭ। ವೀಸದೆ ಬಿಡದೆಂದು ಸತ್ಯದಿಂದಿರಬೇಕು। ಲೇಶವಾದರು ದುಃಖ ಹಚ್ಚಿಕೊಳ್ಳದೆ ಮಹಾ। ತೋಷದಲ್ಲಿರಬೇಕು ನೋಯದಲೆ । ಶ್ರೀಶನೆ ಗತಿಯೆಂದು ಬೇಸರದಲೆ ಬಂದ । ಕ್ಲೇಶಗಳುಣಬೇಕು ಬಂದಾಗಲೂ ದೇಶ ಕಾಲ ಗುಣ ಪರಿಪೂರ್ಣ ಹರಿಯಿರೆ । ಘಾಸಿಯೆಲ್ಲಿಯದೆಂದು ನಲಿಯಬೇಕು । ಶ್ರೀ ಸತಿ ಕಾಲ ವೇದ ಜೀವ ಪ್ರಳಯದಲ್ಲಿ । ನಾಶವಾಗದು ಭೇದ ಸಿದ್ಧವೆಂದೆನಬೇಕು । ವಾಸುದೇವ ನಮ್ಮ ವಿಜಯವಿಠಲನ್ನ। ದಾಸನು ದಾಸರ ದಾಸನಾಗಲಿ ಬೇಕು ॥

**ಬ**ಡತನ ಬಂದರೆ ಹಿಗ್ಗುತಲಿರಬೇಕು । ಜಡನಾಗಿ ಬಾಹಿರದಲಿ ತೋರಲಿಬೇಕು । ಅಡಿಗಡಿಗೆ ಲಜ್ಜೆಗೆಡಬೇಕು ಸರ್ವದಾ । ಒಡಲಿಗೆ ಚಿಂತೆ ಮಾಡದೆ ದೃಢವಿರಬೇಕು। ಒಡವೆ ವಸ್ತು ತಾಯಿತಂದೆ ಈ ಲೋಕದ । ಒಡೆಯ ಕೃಷ್ಣನೆಂದು ಬಿಡದೆ ನಂಬಲಿಬೇಕು । ಎಡೆಗೆ ಪರಿಮಿತ ಧ್ಯಾನ ತರಲಿಬೇಕು। ಕೊಡಬೇಕು ಕೊಡಬೇಕು ಒಬ್ಬರಿಗದರೊಳು । ಕಡುಗಲಿ ವಿಜಯವಿಠಲನ ಪಾದ । ಪಿಡಿದು ಭಜಿಸಬೇಕು ನಲಿನಲಿದಾಡುತ ॥

**ಉ**ಟ್ಟದಕ್ಕಿಂತ ಮೇಲು ಇಟ್ಟದಕ್ಕಿಂತ ಮೇಲು । ತೊಟ್ಟದಕ್ಕಿಂತ ಮೇಲು ವಿಠಲನ ಸ್ಮರಣೆ ಮನ । ಮುಟ್ಟಿ ಬಾಹಿರದಲ್ಲಿ ಅಟ್ಟಹಾಸದಿಂದ । ಚಿಟ್ಟಿಕ್ಕಿ ಕೂಗುವುದು ಇಷ್ಟು ಸುಖಕೆ ಮೇಲು । ದಟ್ಟಡಿಯಿಂದ ತಿಳಿದು ನಿಷ್ಠೆಯಿಂದಲಿರಲು । ಇಷ್ಟಪ್ರಾಪುತ ಆವಗಾರಿಷ್ಟವು ಪರಿಹರ। ಹುಟ್ಟುಸಾವಿಲ್ಲದ ವಿಜಯವಿಠಲ ತಾನು । ಕೊಟ್ಟು ಸಾಕುವ ದಯವಿಟ್ಟು ದಾಸನ ಮಾಡಿ ॥

(ಆಧಾರ: ಬೇಲೂರು ಕೇಶವದಾಸರ *'ಕರ್ನಾಟಕ ಭಕ್ತ ವಿಜಯ'*)



# ಶ್ರೀರಾಮಕೃಷ್ಣ ಆಶ್ರಮ


ಯಾದವಗಿರಿ, ಮೈಸೂರು 570 020

ಫೋನ್: 0821-2417444; 2412424

ಇ-ಮೇಲ್ : rkashram@gmail.com


ಒಟ್ಟಾರೆ ಕಟ್ಟಡದ ನೋಟ



ಕಟ್ಟಲಾಗುತ್ತಿರುವ ಕಟ್ಟಡದ ಭಾಗ



## 'ಸಾಧು ನಿವಾಸ' ಕಟ್ಟಡದ ನಿಧಿಗಾಗಿ

## ಭಕ್ತಬಾಂಧವರಲ್ಲಿ ವಿಶೇಷ ಮನವಿ

ಆತ್ಮೀಯ ಭಕ್ತಬಾಂಧವರೇ,

ಮೈಸೂರಿನ ಶ್ರೀರಾಮಕೃಷ್ಣ ಆಶ್ರಮವು ಪಶ್ಚಿಮ ಬಂಗಾಲ ಕೊಲ್ಕತಾದ ರಾಮಕೃಷ್ಣ ಮಠ ಮತ್ತು ಮಿಷನ್ನಿನ ಒಂದು ಪ್ರಮುಖ ಶಾಖೆಯಾಗಿದೆ. ಈ ಆಶ್ರಮವು ಶ್ರೀರಾಮಕೃಷ್ಣ ಪರಮಹಂಸರ ಸಾಕ್ಷಾತ್ ಶಿಷ್ಯರೂ, ರಾಮಕೃಷ್ಣ ಸಂಘದ ಮೊದಲ ಅಧ್ಯಕ್ಷರೂ ಆಗಿದ್ದ, ಸ್ವಾಮಿ ಬ್ರಹ್ಮಾನಂದರ ಶಿಷ್ಯರಾದ ಸ್ವಾಮಿ ಸಿದ್ಧೇಶ್ವರಾನಂದರಿಂದ 1925, ಜೂನ್ 11 ರಂದು ಉದ್ಘಾಟಿಸಲ್ಪಟ್ಟು, ಯಾದವಗಿರಿಯ ಕೆ.ಆರ್.ಎಸ್. ರಸ್ತೆಯಲ್ಲಿನ ಈಗಿರುವ ಸ್ಥಳಕ್ಕೆ 1931 ರಲ್ಲಿ ಸ್ಥಳಾಂತರಿತವಾಯಿತು. ರಾಮಕೃಷ್ಣ ಮಹಾಸಂಘದ ಹದಿಮೂರನೇ ಪರಮಾಧ್ಯಕ್ಷರಾಗಿದ್ದ ಶ್ರೀಮತ್ ಸ್ವಾಮಿ ರಂಗನಾಥಾನಂದಜಿಯವರು ಮೈಸೂರಿನ ರಾಮಕೃಷ್ಣಾಶ್ರಮದಲ್ಲೇ ತಮ್ಮ ಆಶ್ರಮಜೀವನಕ್ಕೆ ಪಾದಾರ್ಪಣೆ ಮಾಡಿ ತಮ್ಮ ಆಧ್ಯಾತ್ಮಿಕ ಜೀವನದ ಮೊದಲ 9 ವರ್ಷಗಳನ್ನು ಇಲ್ಲಿಯೇ ಕಳೆದಿದ್ದರು.

### ಆಶ್ರಮದ ಸೇವಾ ಚಟುವಟಿಕೆಗಳು

* ಶ್ರೀರಾಮಕೃಷ್ಣ ಮಂದಿರದಲ್ಲಿ ನಿತ್ಯಪೂಜೆ ಮತ್ತು ಒಂದು ವಾರ ನಡೆಯುವ ವಾರ್ಷಿಕೋತ್ಸವ ಉತ್ಸವಗಳು.
* ನಿಯಮಿತ ಸತ್ಸಂಗ ಹಾಗೂ ಆಧ್ಯಾತ್ಮಿಕ ಪ್ರವಚನಗಳು.
* ಭಕ್ತಾದಿಗಳಿಗೆ ಹಾಗೂ ಶಿಕ್ಷಕರಿಗೆ ಉನ್ನತ ಮೌಲ್ಯಗಳ ಕುರಿತು ಆಧ್ಯಾತ್ಮಿಕ ಶಿಬಿರಗಳು.
* ಆಟೋರಿಕ್ಷಾ ಚಾಲಕರು, ಚಮ್ಮಾರರು, ಕೊಳಚೆ ಪ್ರದೇಶದ ನಿವಾಸಿಗಳು, ಆರ್ಥಿಕವಾಗಿ ಹಿಂದುಳಿದವರು ಮೊದಲಾದವರಿಗಾಗಿ ಉಚಿತ ಆಧ್ಯಾತ್ಮಿಕ ಶಿಬಿರಗಳು. ಕಾಲೇಜು ವಿದ್ಯಾರ್ಥಿಗಳಿಗಾಗಿ ವ್ಯಕ್ತಿವಿಕಸನ ಕಾರ್ಯಾಗಾರಗಳು.
* 'ವಿವೇಕಪ್ರಭ' ಕನ್ನಡ ಮಾಸಪತ್ರಿಕೆಯ ಪ್ರಕಟಣೆ.
* ಆರ್ಥಿಕವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದ ವಿದ್ಯಾರ್ಥಿಗಳಿಗೆ ಅಧ್ಯಯನ ದಲ್ಲಿ ಉನ್ನತಿ ಸಾಧಿಸಲು ಸಹಾಯಕವಾಗುವಂತೆ 'ವಿವೇಕ ಶಿಕ್ಷಣ' ಎಂಬ ವಿಶೇಷ ನೆರವಿನ ಉಚಿತ ಶಿಕ್ಷಣ ಕಾರ್ಯಕ್ರಮ. 2000-01ರಿಂದ ಈವರೆಗೂ ಸುಮಾರು 13,000 ವಿದ್ಯಾರ್ಥಿಗಳು ಈ ಕಾರ್ಯಕ್ರಮದ ಪ್ರಯೋಜನವನ್ನು ಪಡೆದಿದ್ದಾರೆ.
* ಆಶ್ರಮದ ಪ್ರಕಟಣೆಗಳ ಪ್ರದರ್ಶನ ಮತ್ತು ರಿಯಾಯಿತಿ ದರದಲ್ಲಿ ಮಾರಾಟ.
* 18,000ಕ್ಕೂ ಹೆಚ್ಚು ಪುಸ್ತಕಗಳು ಹಾಗೂ ಅನೇಕ ನಿಯತಕಾಲಿಕೆಗಳನ್ನು ಒಳಗೊಂಡಿರುವ ಸಾರ್ವಜನಿಕ ಗ್ರಂಥಾಲಯ.
* ಕರ್ನಾಟಕದ ಗ್ರಾಮಾಂತರ ಜನತೆಗಾಗಿ 'ಜ್ಞಾನವಾಹಿನಿ' ಶಿಕ್ಷಣ ಅಭಿಯಾನ ಕಾರ್ಯಕ್ರಮ. ಕರ್ನಾಟಕದ ಗ್ರಾಮಾಂತರ ಪ್ರದೇಶಗಳಲ್ಲಿ ಸಂಚರಿಸುವ ವಿಶೇಷ ವಿನ್ಯಾಸದ ವಾಹನದ ಮೂಲಕ, ಆಶ್ರಮದ ಸಾಧುಗಳಿಂದ ನಡೆಸಲಾಗುವ ಈ ಕಾರ್ಯಕ್ರಮವು ಶಾಲಾವಿದ್ಯಾರ್ಥಿಗಳಲ್ಲಿ ಹಾಗೂ ಗ್ರಾಮೀಣ ಜನತೆಯಲ್ಲಿ ನಮ್ಮ ಭಾರತೀಯ ಸಾಂಸ್ಕೃತಿಕ ಪರಂಪರೆಯ ಚಿರಂತನ ಮೌಲ್ಯಗಳಲ್ಲಿ ಶ್ರದ್ಧೆ, ಆತ್ಮವಿಶ್ವಾಸ ಹಾಗೂ ಸಾಮಾಜಿಕ ಪ್ರಜ್ಞೆಯನ್ನು ಹರಡುವ ಜ್ಞಾನಪ್ರಸಾರದ ಪ್ರಭಾವಶಾಲಿ ಅಭಿಯಾನವಾಗಿದೆ.
* ಸ್ವಾಮಿ ವಿವೇಕಾನಂದರ 150ನೇ ಜಯಂತಿಯ ಅಂಗವಾಗಿ ಆಯೋಜಿಸಿರುವ ಗದಾಧರ ಅಭ್ಯುದಯ ಪ್ರಕಲ್ಪ (ಬಡಮಕ್ಕಳಿಗಾಗಿ ಸರ್ವಾಂಗೀಣ ವ್ಯಕ್ತಿತ್ವ ವಿಕಸನ ಕಾರ್ಯಕ್ರಮ) ಹಾಗೂ 6 ರಿಂದ 9ನೆಯ ತರಗತಿಯ ಸಾವಿರಾರು ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗಾಗಿ ರಾಜ್ಯಾದ್ಯಂತ 300 ಘಟಕಗಳಲ್ಲಿ ಕೈಗೊಂಡಿರುವ ಸುಸ್ಥಿರ ಶ್ರೇಣೀಕೃತ ಮೌಲ್ಯಶಿಕ್ಷಣ ಕಾರ್ಯಕ್ರಮ (SGVEP).

### ನೂತನ ಕಟ್ಟಡದ ಅವಶ್ಯಕತೆ

ಬದಲಾದ ಪರಿಸ್ಥಿತಿಗಳಿಗೆ ಹಾಗೂ ಜನತೆಯ ಬೇಡಿಕೆಗಳಿಗೆ ಕ್ರಿಯಾಶೀಲವಾಗಿ ಸ್ಪಂದಿಸುತ್ತಿರುವ ಆಶ್ರಮವು ತನ್ನ ಕಾರ್ಯಕಲಾಪಗಳನ್ನು ಸಮರ್ಪಕವಾಗಿ ನಡೆಸಿಕೊಂಡು ಹೋಗಲು ಈಗಿರುವ ಆಶ್ರಮದ ಕಾರ್ಯಾಲಯ, ತಂಗುವ ಕೊಠಡಿಗಳೇ ಮೊದಲಾದ ಸೌಲಭ್ಯಗಳು ಸಾಕಾಗುತ್ತಿಲ್ಲ. ಈ ಕೊರತೆಯನ್ನು ನೀಗಿಸಲು ಒಂದು ವಿಶಾಲವಾದ ಕಾರ್ಯಾಲಯ ಹಾಗೂ, ಸಾಧುಗಳ ವಾಸ್ತವ್ಯಕ್ಕಾಗಿ ಈಗಿರುವ ಕಟ್ಟಡಕ್ಕೆ ಹೊಂದಿಕೊಂಡಂತೆ 'ಸಾಧು ನಿವಾಸ' ಎಂಬ ಕಟ್ಟಡವನ್ನು ನಿರ್ಮಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ.

**ಸ್ವಾಮಿ ವಿಜ್ಞಾನಾನಂದ ಸಾಧುನಿವಾಸ:** ಭಗವಾನ್ ಶ್ರೀರಾಮಕೃಷ್ಣರ ನೇರಶಿಷ್ಯರಾದ ಸ್ವಾಮಿ ವಿಜ್ಞಾನಾನಂದರು 1931ರಲ್ಲಿ ಆಶ್ರಮಕ್ಕೆ ಭೇಟಿನೀಡಿದ್ದ ಸ್ಮರಣಾರ್ಥವಾಗಿ ಈ ಕಟ್ಟಡವನ್ನು 'ಸ್ವಾಮಿ ವಿಜ್ಞಾನಾನಂದ ಸಾಧು ನಿವಾಸ' ಎಂದು ಹೆಸರಿಸಲಾಗಿದೆ

| | | |
|---|---|---|
| ಕಟ್ಟಡದ ಒಟ್ಟು ವಿಸ್ತೀರ್ಣ | : | 5947 ಚದರಡಿ |
| ಕೆಳ ಅಂತಸ್ತು (ವಿವಿಧೋಪಯೋಗಿ) | : | 1770 ಚದರಡಿ |
| ನೆಲ ಅಂತಸ್ತು (ಸ್ವಾಗತ ಮತ್ತು ಆಡಳಿತ ಕಛೇರಿ) | : | 1942 ಚದರಡಿ |
| ಮೊದಲನೇ ಅಂತಸ್ತು (ಸಾಧುಗಳ ವಾಸ್ತವ್ಯಕ್ಕೆ) | : | 2235 ಚದರಡಿ |

### ಮನವಿ

ಸಾಧುನಿವಾಸದ ನಿರ್ಮಾಣದ ಅಂದಾಜು ವೆಚ್ಚ 95 ಲಕ್ಷ ರೂಪಾಯಿಗಳು. ಇದಕ್ಕಾಗಿ 35 ಲಕ್ಷ ರೂಪಾಯಿಗಳನ್ನು ಭಾರತದ ಹೆಸರಾಂತ ದತ್ತಿ ಸಂಸ್ಥೆಯೊಂದು, ಕಟ್ಟಡವನ್ನು 12 ತಿಂಗಳಿನಲ್ಲಿ ಪೂರ್ಣಗೊಳಿಸಬೇಕೆಂಬ ಷರತ್ತಿನೊಂದಿಗೆ ಕೊಡುಗೆಯಾಗಿ ನೀಡುತ್ತಿದೆ. ಉಳಿದ 60 ಲಕ್ಷ ರೂಪಾಯಿಗಳನ್ನು ತಕ್ಷಣ ಕ್ರೋಢೀಕರಿಸಬೇಕಾಗಿದೆ. ಆದ್ದರಿಂದ ಆಶ್ರಮದ ಭಕ್ತಾದಿಗಳು, ಹಿತೈಷಿಗಳು ಹಾಗೂ ಉದ್ಯಮಿಗಳು ಉದಾರ ದೇಣಿಗೆಯನ್ನು ನೀಡುವ ಮೂಲಕ ಅತ್ಯಗತ್ಯವಾದ ಈ ಯೋಜನೆಯನ್ನು ಪೂರ್ಣಗೊಳಿಸಲು ಸಹಾಯ ಮಾಡಬೇಕೆಂದು ಕೋರುತ್ತೇವೆ.

### ಕಾಣಿಕೆಗಳನ್ನು ನೀಡುವ ವಿಧಾನ:

* ದೇಣಿಗೆಗಳನ್ನು ಚೆಕ್ ಅಥವಾ ಡ್ರಾಫ್ಟ್ ಮೂಲಕ 'ಶ್ರೀರಾಮಕೃಷ್ಣ ಆಶ್ರಮ, ಮೈಸೂರು' ಎಂಬ ಹೆಸರಿನಲ್ಲಿ ಕಳುಹಿಸಬಹುದು.
* ನೇರವಾಗಿ ಪಾವತಿ ಮಾಡಲು ಇಚ್ಛಿಸುವವರು ಮೈಸೂರಿನ ಸಿಂಡಿಕೇಟ್ ಬ್ಯಾಂಕ್‌ನ ನಮ್ಮ ಎಸ್.ಬಿ. ಖಾತೆಗೆ ಸಂಖ್ಯೆ – ನಂ. 17012010009626 (IFSC : SYNB0001701) ನೇರವಾಗಿ ರವಾನಿಸಿ ಆ ಬಗ್ಗೆ ನಮಗೆ ಇ-ಮೇಲ್ ಮೂಲಕ ಮಾಹಿತಿ ತಿಳಿಸಬೇಕಾಗಿ ವಿನಂತಿ. ನೀವು ನೀಡಿದ ಸಹಾಯಧನಕ್ಕೆ 80G ಕಾಯಿದೆಯ ಅನ್ವಯ ಆದಾಯತೆರಿಗೆ ವಿನಾಯಿತಿ ಇರುತ್ತದೆ.
* ವಿದೇಶದಲ್ಲಿರುವ ದಾನಿಗಳು ತಮ್ಮ ದೇಣಿಗೆಯನ್ನು ಮೈಸೂರಿನ ಕಾರ್ಪೋರೇಷನ್ ಬ್ಯಾಂಕ್‌ನ ನಮ್ಮ ಖಾತೆಗೆ – ಸಂಖ್ಯೆ 027400116003643 (IFSC : CORP0000274) ಪಾವತಿಸಬೇಕಾಗಿ ಕೋರುತ್ತೇವೆ.

ಇಂತಿ ಭಗವತ್ಸೇವೆಯಲ್ಲಿ ತಮ್ಮವ

ಸ್ವಾಮಿ ಮುಕ್ತಿದಾನಂದ

ಅಧ್ಯಕ್ಷರು

ಸಂಪಾದಕೀಯ

# ಹಿಂದೂಧರ್ಮದಲ್ಲಿ ಅನುಭೂತಿ

ಇಂಗ್ಲಿಷ್ ಭಾಷೆಯಲ್ಲಿ Mysticism ಎಂಬ ಪದವಿದೆ. ಯಾವುದೇ ರೀತಿಯ ಅತೀಂದ್ರಿಯ ಅನುಭವವನ್ನು ಸೂಚಿಸಲು ಸಾಮಾನ್ಯವಾಗಿ ಈ ಪದವನ್ನು ಉಪಯೋಗಿಸಲಾಗುತ್ತದೆ. ಇದನ್ನು ಕನ್ನಡದಲ್ಲಿ 'ಅನುಭೂತಿ' ಅಥವಾ 'ಅನುಭಾವ' ಎಂದು ಅನುವಾದಿಸಬಹುದು. ಎವೆಲಿನ್ ಅಂಡರ್‌ಹಿಲ್ (Evelyn Underhill) ಎಂಬ ಲೇಖಕರು ಹೀಗೆ ಬರೆಯುತ್ತಾರೆ: " ... mysticism in its pure form, is the science of ultimates, the science of union with the Absolute, and nothing else, and the mystic is the person who attains to this union, not the person who talks about it. Not to know about, but to be, is the mark of the real initiate." ("ಪರಿಶುದ್ಧ ಸ್ವರೂಪದಲ್ಲಿ 'ಅನುಭೂತಿ' ಎನ್ನುವುದು ಮೂಲಭೂತ ತತ್ತ್ವದ ವಿಜ್ಞಾನ, ಸತ್ಯತತ್ತ್ವದ ಜೊತೆಗಿನ ಅವಿನಾಭಾವ. 'ಅನುಭಾವಿ' ಎನ್ನುವವನು ಇಂಥ ಐಕ್ಯತೆಯನ್ನು ಹೊಂದಿದವನು, ಅದರ ಬಗ್ಗೆ ಬರಿದೆ ಮಾತನಾಡುವವನಲ್ಲ. (ಆಧ್ಯಾತ್ಮಿಕ ಪ್ರವೇಶ ಪಡೆದ) ನೈಜ ದೀಕ್ಷಿತನ ಲಕ್ಷಣವೆಂದರೆ ಅನುಭೂತಿಯ ಬಗ್ಗೆ ಮಾತನಾಡುವುದಲ್ಲ, ಅದಕ್ಕೆ ಬದಲಾಗಿ ಅನುಭೂತಿಯನ್ನು ಸಿದ್ಧಿಸಿಕೊಳ್ಳುವುದು.")

ಹಿಂದೂಧರ್ಮದಲ್ಲಿ ಆರು ದರ್ಶನಗಳ ಉಲ್ಲೇಖವನ್ನು ನೋಡುತ್ತೇವೆ. ಅಲೌಕಿಕ ವಿಚಾರಗಳಲ್ಲಿ ವೇದಗಳೇ ಪರಮ ಪ್ರಮಾಣವೆಂಬುದು ಸಾಂಪ್ರದಾಯಿಕ ನಂಬಿಕೆ. ಆದರೆ, ಇವೆಲ್ಲಕ್ಕಿಂತ ಅನುಭಾವಿಯ ಅಪರೋಕ್ಷ ದರ್ಶನವೇ ಪರಮಶ್ರೇಷ್ಠ ಹೀಗೆಂದು ಉಪನಿಷತ್ತುಗಳೇ ಘೋಷಿಸುತ್ತವೆ. ವೇದಗಳಿಗೆ ಹೋಲಿಸಿದಲ್ಲಿ, ಸಾಕ್ಷಾತ್ಕಾರ ಹೊಂದಿದ ಅನುಭಾವಿಯ ದರ್ಶನವೇ ಅಧಿಕೃತವಾದುದು ಎಂದು ಅವುಗಳ ಅಭಿಪ್ರಾಯ.

ಆಧುನಿಕ ದೃಷ್ಟಿಕೋನದಿಂದ 'ಅನುಭೂತಿ'ಗೆ ಐದು ಬಗೆಯ ವ್ಯಾಖ್ಯಾನಗಳನ್ನು ನೀಡಬಹುದು. ಅವೆಲ್ಲವೂ 'ಹಿಂದೂ ಅನುಭೂತಿ' ಗೆ ಸಮರ್ಪಕವಾಗಿ ಅನ್ವಯಿಸುತ್ತವೆ. ಇವುಗಳನ್ನು ಅಧ್ಯಯನ ಮಾಡುವುದರಿಂದ, ಹಿಂದೂ ಅನುಭೂತಿಯ ಮಹತ್ವ ಮತ್ತು ವಿಶಿಷ್ಟತೆಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯ.

**೧. ಅನುಭೂತಿಯೆಂದರೆ ಅತೀಂದ್ರಿಯ ತತ್ತ್ವ, ಮೂಲಭೂತ ಸತ್ಯ ಅಥವಾ ಭಗವಂತನ ಸಾಕ್ಷಾತ್ ಪ್ರಜ್ಞೆ :** ಧಾರ್ಮಿಕ ಅನುಭವದಲ್ಲಿ, ಶ್ರದ್ಧಾಳುವು ಅತೀಂದ್ರಿಯ ತತ್ತ್ವದೊಡನೆ ಸಂಪರ್ಕ ಹೊಂದುತ್ತಾನೆ. ಹೆಬೆಲ್ ಎಂಬ ವಿದ್ವಾಂಸರು ಹೇಳುವ ಪ್ರಕಾರ, ಶ್ರದ್ಧಾಳುವು ಭಗವಂತನೊಡನೆ ಸಂಬಂಧ ಪಡೆಯುವ ಸುಸಂಬದ್ಧ ವಿಧಾನವನ್ನೇ 'ಆಧ್ಯಾತ್ಮಿಕ ಅನುಭವ' ಎಂದು ಕರೆಯುವುದು. ಮೂರ್ ಮತ್ತು ಹೆಬೆಲ್ ಎಂಬ ಇಬ್ಬರು ವಿದ್ವಾಂಸರು ಎರಡು ರೀತಿಯ ಆಧ್ಯಾತ್ಮಿಕ ಅನುಭವಗಳಿವೆ ಎನ್ನುತ್ತಾರೆ. ಒಂದು **ಪರೋಕ್ಷ** ಮತ್ತು ಇನ್ನೊಂದು **ಅಪರೋಕ್ಷ**. ಆಚರಣೆಗಳು, ಗುರುಗಳು, ಧಾರ್ಮಿಕ ಪಂಗಡಗಳು, ವಿಗ್ರಹಗಳು ಅಥವಾ ನೈಸರ್ಗಿಕ ಜಗತ್ತು ಮುಂತಾದ ಮಧ್ಯವರ್ತಿಗಳ ಮೂಲಕ ಶ್ರದ್ಧಾಳುವು ಪವಿತ್ರತೆಯ ಭಾವನೆಯನ್ನು ಹೊಂದುವುದನ್ನು **'ಪರೋಕ್ಷ ಅನುಭವ'** ಎಂದು ಕರೆಯಬಹುದು. ಯಾವುದೇ ಮಧ್ಯವರ್ತಿ ಸಂಸ್ಥೆ ಅಥವಾ ವ್ಯಕ್ತಿ ಇಲ್ಲದೆಯೇ, ಶ್ರದ್ಧಾಳುವಿಗೆ ದಿವ್ಯತೆಯ ಸಂಸ್ಪರ್ಶವು ಉಂಟಾಗುವುದೇ **'ಅಪರೋಕ್ಷ ಅನುಭವ.'** ಇಂಥ ಅನುಭೂತಿಯಲ್ಲಿ ದಿವ್ಯತೆಯ ಸಂಬಂಧದ 'ಪ್ರತ್ಯೇಕತೆ'ಯ ಭಾವನೆಯು ಲುಪ್ತವಾಗುತ್ತದೆ ಮತ್ತು ಶ್ರದ್ಧಾಳುವು ದಿವ್ಯತೆಯೊಂದಿಗೆ ಪರಿಪೂರ್ಣ ಐಕ್ಯತೆಯನ್ನು ಹೊಂದುತ್ತಾನೆ. ಆಗ ಶ್ರದ್ಧಾಳುವು ತಾನು ದಿವ್ಯತೆಯಿಂದ ಭಿನ್ನನಲ್ಲವೆಂದು ಕಂಡುಕೊಳ್ಳುತ್ತಾನೆ; ದಿವ್ಯತೆಯೊಡನೆ ಅಖಂಡಭಾವನೆಯನ್ನು ಪಡೆದುಕೊಳ್ಳುತ್ತಾನೆ.

ಹಿಂದೂಧರ್ಮದಲ್ಲಿ ಬರುವ 'ಸಮಾಧಿ'ಯು ಇಂಥ ಅನುಭೂತಿಯ ಉತ್ತಮ ನಿದರ್ಶನವಾಗಿದೆ. **ಯೋಗಶ್ಚಿತ್ತವೃತ್ತಿ ನಿರೋಧಃ** – 'ಮಾನಸಿಕ ವೃತ್ತಿಗಳ ನಿರೋಧವೇ ಯೋಗ.' ಇಂಥ ನಿರೋಧವು ತನ್ನ ಪರಿಪೂರ್ಣತೆಯನ್ನು 'ಸಮಾಧಿ' ನೆಲೆಯಲ್ಲಿ ಪಡೆದುಕೊಳ್ಳುತ್ತದೆ. ಇದೇ ಸಾಧಕನ ಲಕ್ಷ್ಯ. ಇದನ್ನು ಅವನು ಅಷ್ಟಾಂಗಯೋಗದ ಅನುಷ್ಠಾನದ ಮೂಲಕ ಸಾಧಿಸಲು ಪ್ರಯತ್ನಿಸುತ್ತಾನೆ. ಸಮಾಧಿಯಲ್ಲಿ ಎರಡು ಹಂತಗಳಿವೆ: **೧. ಸವಿಕಲ್ಪ ಸಮಾಧಿ ೨. ನಿರ್ವಿಕಲ್ಪ ಸಮಾಧಿ.** ಧ್ಯೇಯವಸ್ತುವಿನೊಡನೆ ಸಂಪೂರ್ಣ ತಾದಾತ್ಮ್ಯ ಹೊಂದಿದ್ದರೂ, ಸಾಧಕನು ತನ್ನ ಸ್ವಂತ ವ್ಯಕ್ತಿತ್ವದ ಛಾಯೆ ಉಳಿಸಿಕೊಂಡಿರುವ ಸ್ಥಿತಿ ಸವಿಕಲ್ಪ ಸಮಾಧಿ. ನಿರ್ವಿಕಲ್ಪ ಸಮಾಧಿಯಲ್ಲಿ **ಧ್ಯಾತೃ** (ಧ್ಯಾನ ಮಾಡುವವನು) ಎಂಬ ಭಾವನೆಯೂ ನಾಶವಾಗಿ, **ಧ್ಯೇಯವಸ್ತು** ಮಾತ್ರ ಬೆಳಗುತ್ತಿರುತ್ತದೆ (ಅರ್ಥಮಾತ್ರ ನಿರ್ಭಾಸಾ). ಬೇರೆಲ್ಲ ರೀತಿಯ ಮಾನಸಿಕ ವೃತ್ತಿಗಳೂ ಅಲ್ಲಿ ನಶಿಸಿಹೋಗುತ್ತವೆ. ಅವು ಮತ್ತೆ ಹೊರಹೊಮ್ಮುವ ಸಂದರ್ಭ ಇರುವುದಿಲ್ಲ. ಹೀಗಾಗಿ ಈ ಬಗೆಯ ಸಮಾಧಿಯನ್ನು 'ನಿರ್ಬೀಜ ಸಮಾಧಿ' ಎಂದೂ ಕರೆಯುತ್ತಾರೆ. ಸ್ವಾಮಿ ವಿವೇಕಾನಂದರ ಪ್ರಕಾರ, ಆಧ್ಯಾತ್ಮಿಕ ಜೀವನದ ಉನ್ನತ ಆದರ್ಶವೇ ಈ ಸಮಾಧಿಯ ಸಿದ್ಧಿ. ಇದನ್ನೇ 'ಅಪರೋಕ್ಷಾನುಭೂತಿ' ಎಂದು ಕರೆಯುವುದು. ಇದೊಂದೇ ನೈಜಜ್ಞಾನದ ಸ್ಥಿತಿ.

**೨. ಅನುಭೂತಿಯೆಂದರೆ ಅನುಭಾವಿಗಳು ವಿವರಿಸುವ ಭಗವತ್ಸಾನ್ನಿಧ್ಯದ ದರ್ಶನ:** ಹಿಂದೂ ಧರ್ಮಗ್ರಂಥಗಳಲ್ಲಿ, ಅನುಭಾವಿಗಳಾದ ಮಹಾತ್ಮರು ಹಲವಾರು ರೀತಿಯ

ದರ್ಶನಗಳ ವಿವರಗಳನ್ನು ನೀಡುತ್ತಾರೆ. ಅವರ ಆಧ್ಯಾತ್ಮಿಕ ಶಕ್ತಿಯ ಆಧಾರ, ಅವರು ಅನುಭೂತಿಯ ಉತ್ತುಂಗ ಶಿಖರವನ್ನು ಏರಿ ಗಳಿಸಿದ ಸಿದ್ಧಿಯೇ ಹೊರತು, ಕೇವಲ ನಂಬಿಕೆಯಲ್ಲ. ಈ ವಿಚಾರದಲ್ಲಿ ಅವರು ತಮ್ಮ ಸಹಚರರ ಭಿನ್ನ ಭಿನ್ನ ದರ್ಶನಗಳನ್ನು ಮತ್ತು ಆಧ್ಯಾತ್ಮಿಕ ಅನುಭವಗಳನ್ನು ಗೌರವಿಸುತ್ತಿದ್ದರು. ಇದರಿಂದಾಗಿ, ವಿವಿಧ ಧ್ಯಾನಪದ್ಧತಿಗಳ ಮತ್ತು ಆಚರಣಾವಿಧಾನಗಳ ನೂರಾರು ಬಗೆಗಳನ್ನು ನಾವು ನಮ್ಮ ಶಾಸ್ತ್ರಗ್ರಂಥಗಳಲ್ಲಿ ನೋಡಲು ಸಾಧ್ಯವಾಗಿದೆ. ಹಿಂದೂ ಸಂಪ್ರದಾಯದಲ್ಲಿ ಅನುಭೂತಿಯ ವೈವಿಧ್ಯತೆಗೆ ಸಮ್ಮತಿ ದೊರಕಿದ್ದು ಮಾತ್ರವಲ್ಲ, ಅದಕ್ಕೆ ಪ್ರೋತ್ಸಾಹವನ್ನೂ ನೀಡಲಾಗುತ್ತಿತ್ತು. ಹೀಗಾಗಿ, ಇದರ ಹಲವಾರು ಪಂಗಡಗಳಿಗೆ ಸೇರಿದ ನೂರಾರು ಅನುಭಾವಿಗಳು ಮೂಡಿಬರಲು ಸಾಧ್ಯವಾಯಿತು. ಅವರೆಲ್ಲರ ವಿವಿಧ ರೀತಿಯ ದರ್ಶನಗಳು ಹಿಂದೂ ಅನುಭೂತಿಯನ್ನು ಸಮೃದ್ಧವಾಗಿಸಿವೆ.

೩. **ಅನುಭೂತಿಯೆಂದರೆ, ಒಬ್ಬ ವ್ಯಕ್ತಿಯು ಅತಿ ನಿಕಟವಾದ ಮತ್ತು ವ್ಯಕ್ತಿಗತ ಅನುಭವದಿಂದ ನೇರವಾಗಿ ಪಡೆದುಕೊಳ್ಳಬಹುದಾದ, ಇಂದ್ರಿಯ ಅಥವಾ ಬುದ್ಧಿಗೆ ಅತೀತವಾದ ತತ್ತ್ವಗಳ ಅಸ್ತಿತ್ವದಲ್ಲಿ ನಿಶ್ಚಯಭಾವ:** ಮಾನವನು ಸಾಧಾರಣವಾಗಿ ಲೌಕಿಕ ಸಂಗತಿಗಳ ಬಗ್ಗೆ ಆಲೋಚಿಸುತ್ತಾನೆ. ಆದರೆ ಅಂಥ ಆಲೋಚನೆಯನ್ನು ಸಾಧನೆಯ ಮೂಲಕ ಅಲೌಕಿಕ ಸಂಗತಿಗಳಿಗೂ ವಿಸ್ತರಿಸಲು ಸಾಧ್ಯ. ತನ್ನ ಅನುಭೂತಿ ಶಕ್ತಿಯ ಬಲದಿಂದ ಅವನು ಸಾಧಾರಣ ಕಣ್ಣುಗಳು ನೋಡಲಾಗದ್ದನ್ನು ನೋಡಬಲ್ಲ ಮತ್ತು ಸಾಧಾರಣ ಕಿವಿಗಳು ಕೇಳಲಾಗದ್ದನ್ನು ಕೇಳಬಲ್ಲ. ಹೀಗೆ ತನ್ನ ಇಂದ್ರಿಯಗಳ ಸೀಮಿತತೆಯಿಂದಾಚೆಗೂ ಅವನು ಏರಬಲ್ಲ. ಆಮೂಲಕ ಇಂದ್ರಿಯಾತೀತ ಅಜ್ಞಾತಲೋಕವು ಒಡ್ಡುವ ಸವಾಲನ್ನು ಸ್ವೀಕರಿಸಿ, ಅದರ ರಹಸ್ಯಗಳನ್ನು ತನ್ನ ಸ್ವಪ್ರಯತ್ನದಿಂದ ಅನ್ವೇಷಿಸಬಲ್ಲ. ಇದೇ ಅನುಭೂತಿ ಮಾರ್ಗ. ಈ ವಿಷಯದಲ್ಲಿ ಕಠೋಪನಿಷತ್ತು ಹೀಗೆ ಹೇಳುತ್ತದೆ: **'ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್ ಆವೃತ್ತಚಕ್ಷುರಮೃತತ್ತ್ವಮಿಚ್ಛನ್'** – "ಯಾವನೋ ಒಬ್ಬ ಧೀರನು ಒಳತೆರೆದ ಕಣ್ಣುಗಳುಳ್ಳವನಾಗಿ ಅಮೃತತತ್ತ್ವವನ್ನು ಇಚ್ಛಿಸುತ್ತ, ಪ್ರತ್ಯಗಾತ್ಮನನ್ನು ಅನ್ವೇಷಿಸುತ್ತಾನೆ."

ಹಿಂದೂಧರ್ಮದಲ್ಲಿ ಕಂಡುಬರುವ ಧ್ಯಾನ ವಿಧಾನಗಳು ಮತ್ತು ಆಧ್ಯಾತ್ಮಿಕ ಅನುಭೂತಿಗಳ ಗುರಿ ಇದು: ಮಾನವನ ಅಂತರಂಗ ಮತ್ತು ಬಹಿರಂಗ ಜಗತ್ತಿನ ಸಾರಸತ್ವವು ಒಂದೇ ಎಂದು ಸಾಕ್ಷಾತ್ಕರಿಸಿಕೊಳ್ಳುವುದು; ಆಮೂಲಕ ಅಖಂಡ ಅಸ್ತಿತ್ವದ ಏಕಮೇವ ತತ್ತ್ವವನ್ನು ಅರಿತುಕೊಳ್ಳುವುದು. ಇಂಥ ಸಾಕ್ಷಾತ್ಕಾರ ಅಥವಾ ಅರಿವು ಉಂಟಾಗುವುದು ನೇರ ಅನುಭೂತಿಯಿಂದ ಮಾತ್ರ. ಇಂಥ ಅನುಭವದಲ್ಲಿ ಬಾಹ್ಯ ಸಂಗತಿಗಳ ಪ್ರಭಾವವು ಕಿಂಚಿತ್ತೂ ಇರುವುದಿಲ್ಲ. ಅಲ್ಲದೆ ಆ ಅತ್ಯುನ್ನತ ಸ್ತರದಲ್ಲಿ, ಅನುಭೂತಿ ಮತ್ತು ಪೂರ್ಣಜ್ಞಾನಗಳ ನಡುವಣ ಅಂತರ ಅಳಿಸಿಹೋಗುತ್ತದೆ. ಲೌಕಿಕ ಅನುಭವಗಳಿಗೆ ಬೇಕಾಗುವ ಇಂದ್ರಿಯಗಳು ಮತ್ತು ಬುದ್ಧಿಗಳ ಅಗತ್ಯ ಇಲ್ಲಿ ಅಪ್ರಸ್ತುತ. ಆ ಸಂದರ್ಭದಲ್ಲಿ ಅನುಭೂತಿಯೇ ಜ್ಞಾನ; ಜ್ಞಾನವೇ ಅನುಭೂತಿ. ಇದು ಒಬ್ಬ ವ್ಯಕ್ತಿಯ ಸ್ವತಂತ್ರ ಮತ್ತು ಅತಿ ಸಾಮೀಪ್ಯ ಅನುಭವ.

೪. **ಅನುಭೂತಿಯೆಂದರೆ ದಿವ್ಯತೆ, ಭಗವಂತ ಅಥವಾ ಮೂಲಭೂತ ಸತ್ಯದೊಂದಿಗೆ ಐಕ್ಯಭಾವದ ನೇರ ಅನುಭವವೇ ಗುರಿಯಾಗುಳ್ಳ ಧ್ಯಾನವಿಧಾನ, ಪ್ರಾರ್ಥನೆ ಅಥವಾ ದೇವತಾಶಾಸ್ತ್ರ. 'ಅಂಥ ಅನುಭವವು ಅಧಿಕೃತವಾದುದು ಮತ್ತು ಜ್ಞಾನದ ಬಹು ಮುಖ್ಯವಾದ ಆಕರ' ಎಂಬ ನಿಶ್ಚಯಭಾವನೆ ಅನುಭಾವಿಯಲ್ಲಿ ಇರುತ್ತದೆ. ಜ್ಞಾನಶಾಸ್ತ್ರದ (Epistemology) ದೃಷ್ಟಿಯಿಂದ ನೋಡುವುದಾದರೆ, ಯಾವುದೇ ರೀತಿಯ ಜ್ಞಾನ ಅಥವಾ ವಿಶ್ವಾಸವಿಟ್ಟ ಅನುಭವವನ್ನು ಸಂಪಾದಿಸಿಕೊಳ್ಳಲು, 'ಸಂವೇದನೆ' ಅಥವಾ 'ನಂಬಿಕೆ' ಮುಂತಾದ ವೈಚಾರಿಕತೆಗೆ ಮೀರಿದ ವಿಧಾನಗಳನ್ನು ಉಪಯೋಗಿಸಿಕೊಳ್ಳುವುದೇ ಅನುಭೂತಿಯಾಗುತ್ತದೆ.**

ಅನುಭೂತಿಯಲ್ಲಿ ಎರಡು ಹಂತಗಳಿವೆ: ೧. **ಆಚರಣಾತ್ಮಕ ಅನುಭೂತಿ** ಮತ್ತು ೨. **ಮನನ** ಅಥವಾ **ಧ್ಯಾನಾತ್ಮಕ ಅನುಭೂತಿ**.

**೧. ಆಚರಣಾತ್ಮಕ ಅನುಭೂತಿ:** ವೈದಿಕ ಕಾಲದಲ್ಲಿ ಯಜ್ಞಯಾಗಾದಿಗಳೇ ಮೊದಲಾದ ಆಚರಣೆಗಳಿಗೆ ಪ್ರಾಶಸ್ತ್ಯವಿತ್ತು. ಇವುಗಳು 'ಅಪೂರ್ವ' ಎನ್ನುವ ರಹಸ್ಯ ಶಕ್ತಿಯನ್ನು ಉತ್ಪಾದಿಸುತ್ತವೆ ಮತ್ತು ಅಂಥ ಶಕ್ತಿಯು, ಆಚರಣೆಯಲ್ಲಿ ತೊಡಗಿಸಿಕೊಂಡ ವ್ಯಕ್ತಿಯ ಅನುಕೂಲಕ್ಕಾಗಿ ನಿಸರ್ಗ ನಿಯಮಗಳಲ್ಲಿ ಮಾರ್ಪಾಡನ್ನು ತರಲು ಶಕ್ತವಾಗಿದೆ ಎಂದು ನಂಬಲಾಗಿತ್ತು. ಹಾಗೆಯೇ ಈ ಬಗೆಯ ಕರ್ಮದಿಂದ ಇಷ್ಟಪ್ರಾಪ್ತಿಯನ್ನು ಮಾಡಿಕೊಳ್ಳುವುದೇ ವೇದದ ಏಕಮಾತ್ರ ಉದ್ದೇಶ ಎಂಬ ಅಭಿಪ್ರಾಯವೂ ಪ್ರಚಲಿತವಾಗಿತ್ತು. ಹಾಗೆಂದೇ ಪ್ರಾಕೃತಿಕ ಶಕ್ತಿಗಳನ್ನು ಪ್ರತಿನಿಧಿಸುವ ದೇವತಾರೂಪಗಳನ್ನು ಒಲಿಸಿಕೊಳ್ಳುವುದಕ್ಕಾಗಿ ಮಂತ್ರಗಳ ರಚನೆಯಾಯಿತು. ಹಿಂದೂ ಧರ್ಮದ ವಿವಿಧ ಪಂಗಡಗಳಲ್ಲಿ ಕಂಡುಬರುವ ಸಾವಿರಾರು ವಿಧದ ಪೂಜೆ ಮತ್ತು ಆಚರಣೆಗಳಿಗೆ ಇದೇ ಮೂಲ.

**೨. ಮನನ ಅಥವಾ ಧ್ಯಾನಾತ್ಮಕ ಅನುಭೂತಿ:** ಮುಂದಿನ ಹಂತವೆಂದರೆ, ಯಜ್ಞಯಾಗಗಳು ಮತ್ತು ಪೂಜಾವಿಧಾನಗಳ ಸಂಕೀರ್ಣ ವಿಧಾನವನ್ನು, ಸ್ವತಃ ಆಚರಿಸದೆ, ಕೇವಲ ಮನನ ಅಥವಾ ಧ್ಯಾನ ಮಾಡುವುದು. ಇಂಥ ಮಾನಸಿಕ ಅಥವಾ ಬೌದ್ಧಿಕ ಆಚರಣಾವಿಧಾನವನ್ನು ಆರಣ್ಯಕಗಳು ಮತ್ತು ಪ್ರಾಚೀನ ಉಪನಿಷತ್ತುಗಳಲ್ಲಿ ಕಾಣುತ್ತೇವೆ. ಇವುಗಳೇ ಮುಂದೆ ಹಲವಾರು ರೀತಿಯ ಧ್ಯಾನ ಅಥವಾ ಉಪಾಸನಾ ವಿಧಾನಗಳಿಗೆ ಕಾರಣವಾದುವು. ಉಪನಿಷತ್ತುಗಳ ಪರಿಭಾಷೆಯಲ್ಲಿ ಅವುಗಳನ್ನು 'ವಿದ್ಯಾ' ಎನ್ನುತ್ತಾರೆ. ಅವುಗಳಲ್ಲಿ ನಾಲ್ಕು ವಿಧ. ಇವನ್ನು ಅಧ್ಯಯನ ಮಾಡುವ ಮೊದಲು, ಎರಡು ಪದಗಳ ಅರ್ಥವನ್ನು ತಿಳಿದುಕೊಳ್ಳಬೇಕಾಗುತ್ತದೆ. ಒಂದು, **ದೃಷ್ಟಿ** ಮತ್ತು ಇನ್ನೊಂದು, **ಬುದ್ಧಿ**. ದೃಷ್ಟಿ ಎಂದರೆ ನಾವು ಧ್ಯಾನಮಾಡುವ ಧ್ಯೇಯವಸ್ತು. ಬುದ್ಧಿ ಎಂದರೆ ಧ್ಯಾನದ ಸಮಯದಲ್ಲಿ ಆ ಧ್ಯೇಯವಸ್ತುವಿನ ಬಗೆಗಿರುವ ನಮ್ಮ ಭಾವನೆ. ಇದರ ಆಧಾರದ ಮೇಲೆ ಉಪಾಸನೆಯನ್ನು ವಿಂಗಡಿಸಲಾಗಿದೆ: **೧. ಸತ್ಯವತಿ:** ಇಲ್ಲಿ ದೃಷ್ಟಿ ಮತ್ತು ಬುದ್ಧಿಗಳು ಒಂದೇ ಆಗಿರುತ್ತವೆ. ಉದಾಹರಣೆಗೆ ಈಶಾವಾಸ್ಯ ಉಪನಿಷತ್ತಿನ ಪ್ರಾರಂಭದಲ್ಲಿ ಬರುವ '*ಈಶಾವಾಸ್ಯಮಿದಂ ಸರ್ವಂ*' (ಎಲ್ಲವನ್ನೂ ಭಗವಂತನಿಂದಲೇ ಆವರಿಸಿಬಿಡಬೇಕು) ಎನ್ನುವ ಉಪಾಸನೆ. **೨. ಅಂಗವತಿ:**

ಧ್ಯೇಯವಸ್ತುವು ಒಂದು ದೇವತೆಯ ರೂಪದಲ್ಲಿ ಇರಬಹುದು. ಆ ರೂಪದ ಅಂಗಗಳನ್ನು ಕುರಿತು ಸಾಧಕನು ಧ್ಯಾನಿಸಲು ಇಚ್ಛಿಸಬಹುದು. ಆಗ ದೃಷ್ಟಿ ದೇವತೆಯಾಗಿದ್ದರೂ, ಬುದ್ಧಿ ಅದರ ಅಂಗ. ಇಂಥ ಉಪಾಸನೆಯನ್ನು ಅಂಗವತಿ ಎನ್ನುತ್ತಾರೆ. **೩. ಅನ್ಯವತಿ:** ಈ ಬಗೆಯ ಉಪಾಸನೆಯಲ್ಲಿ ದೃಷ್ಟಿ ಮತ್ತು ಬುದ್ಧಿಗಳೆರಡೂ ಸಂಪೂರ್ಣವಾಗಿ ಭಿನ್ನವಾಗಿರುತ್ತವೆ. ಉದಾಹರಣೆಗೆ ಸಾಲಿಗ್ರಾಮ. ಇದನ್ನು ವಿಷ್ಣುವಿನ ಸಂಕೇತವಾಗಿ ಪೂಜಿಸುತ್ತಾರೆ. ಆದರೆ ಇವೆರಡೂ ವಿಭಿನ್ನ ಸಂಗತಿಗಳು. ಹಾಗೆ ನೋಡಿದರೆ, ಎಲ್ಲ ರೀತಿಯ ಪ್ರತಿಮಾಪೂಜೆಯೂ ಅನ್ಯವತಿ ಉಪಾಸನೆಯೇ ಆಗಿದೆ. **೪. ನಿಧಾನವತಿ:** ನಿಧಾನ ಎಂದರೆ ಸಂಕೇತ. ಬೃಹದಾರಣ್ಯಕ ಉಪನಿಷತ್ತಿನ ಮೊದಲ ಭಾಗದಲ್ಲಿ ಅಶ್ವಮೇಧ ಯಜ್ಞದ ಉಲ್ಲೇಖವಿದೆ. ಇಲ್ಲಿ ಯಜ್ಞವೇ ಮಾನಸಿಕ ಉಪಾಸನೆಯಾಗುತ್ತದೆ. ಈ ಉಪಾಸನೆಯಲ್ಲಿ ಕುದುರೆಯನ್ನು ಅಖಂಡ ವಿಶ್ವದ ಸಂಕೇತವಾಗಿ ಬಿಂಬಿಸಲಾಗಿದೆ. ಅಂದರೆ, ಕಣ್ಣಿಗೆ ಕಾಣುವ ಮೂರ್ತವಸ್ತುವೊಂದನ್ನು, ಕಣ್ಣಿಗೆ ಕಾಣದ ಅಮೂರ್ತ ತತ್ತ್ವದ ಸಂಕೇತವನ್ನಾಗಿ ಇಲ್ಲಿ ಪರಿಗಣಿಸಲಾಗುತ್ತದೆ.

ಇಲ್ಲಿ ಒಂದು ಸಂದೇಹ ಬರಬಹುದು. ಹಿಂದೂಧರ್ಮದಲ್ಲಿ ಹಲವಾರು ರೀತಿಯ ಧ್ಯಾನವಿಧಾನಗಳನ್ನು ನೋಡುತ್ತೇವೆ. ಹಾಗಾದರೆ ಹಿಂದೂಧರ್ಮವು ಬಹುದೇವತಾ ಉಪಾಸನೆ ಆಚರಣೆಯಲ್ಲಿರುವ ಧರ್ಮವೇ? ಈ ಸಮಸ್ಯೆಗೆ ಉಪನಿಷತ್ತುಗಳ ಸಂದರ್ಭದಲ್ಲಿ ಸಮರ್ಥ ವಿಶ್ಲೇಷಣೆಯನ್ನು ಪ್ರಖ್ಯಾತ ವೈದಿಕ ವಿದ್ವಾಂಸರಾಗಿದ್ದ ಶ್ರೀ ಟಿ. ವಿ. ಕಪಾಲಿ ಶಾಸ್ತ್ರಿ ಅವರು ಮಾಡಿದ್ದಾರೆ. ಅದನ್ನು ಹೀಗೆ ಸಂಗ್ರಹಿಸಬಹುದು: ಉಪನಿಷತ್ತುಗಳಲ್ಲಿ ಸಾಧನೆಗಳು ಮತ್ತು ಸತ್ಯತತ್ತ್ವದ ಬಗೆಗಿನ ಹೇಳಿಕೆಗಳು ಪರಸ್ಪರ ವಿರುದ್ಧವಾಗಿರುವಂತೆ ತೋರುತ್ತವೆ. ಆದರೆ ಅವೆಲ್ಲವನ್ನೂ, ಆಯಾ ಸಂದರ್ಭಕ್ಕೆ ತಕ್ಕಂತೆ ಅಧಿಕೃತವೆಂದೇ ಪರಿಗಣಿಸಲಾಗಿದೆ. ವಿಭಿನ್ನ ದೃಷ್ಟಿಕೋನಗಳು ಸತ್ಯಕ್ಕೆ ವಿರೋಧಿಯಾದವು ಮತ್ತು ಅಮುಖ್ಯವಾದುವು ಎಂದು ಉಪನಿಷತ್ತಿನ ಋಷಿಗಳು ಎಂದಿಗೂ ಪರಿಗಣಿಸಲಿಲ್ಲ. ಅದಕ್ಕೆ ಬದಲಾಗಿ, ಆಧ್ಯಾತ್ಮಿಕ ಅನುಭವದ ಸತ್ಯಾಂಶಗಳು ಎಂದೇ ಅವುಗಳೆಲ್ಲಕ್ಕೂ ಸಮಾನವಾದ ಮನ್ನಣೆ ನೀಡಿದ್ದಾರೆ. ಅಲ್ಲದೆ, ಪರಸ್ಪರ ವಿರುದ್ಧವೆಂಬಂತೆ ಕಂಡುಬರುವ ಈ ಹೇಳಿಕೆಗಳಿಗೆ ಸಮಾನ ಭೂಮಿಕೆಯನ್ನು ಒದಗಿಸುವ ಕಾರ್ಯವನ್ನೂ ಅವರು ಮಾಡುವುದಿಲ್ಲ. ಏಕೆಂದರೆ ಸತ್ಯದ ನೆಲೆಯಲ್ಲಿ ಈ ಎಲ್ಲ ವೈವಿಧ್ಯಗಳಿಗೆ ಯಾವ ಆಧಾರವೂ ಇಲ್ಲ ಎಂದು ಋಷಿಮುನಿಗಳು ಚೆನ್ನಾಗಿ ಅರಿತಿದ್ದರು. ಅಲ್ಲದೆ, ಸತ್ಯವನ್ನು ಬಗೆಬಗೆಯ ರೂಪಗಳಲ್ಲಿ, ಹಲವಾರು ಮಾರ್ಗಗಳ ಮೂಲಕ ಪಡೆಯಬಹುದು ಎಂದೂ ಅವರು ತಿಳಿದಿದ್ದರು.

**೫. ಅನುಭೂತಿಯೆಂದರೆ ಭಗವಂತನ ಜೊತೆಗೆ ನೇರವಾದ ಸಂಬಂಧವನ್ನು ಬೆಳೆಸಿಕೊಳ್ಳುವುದು. ಹೀಗಾಗಿ ಅದು ಧರ್ಮದ ಜೊತೆಗೆ ಅವಿನಾಭಾವ ಸಂಬಂಧವನ್ನು ಹೊಂದಿದೆ. ಅನುಭೂತಿಯು ವ್ಯಕ್ತಿಯೊಬ್ಬನ ಸ್ವಂತ ಅನುಭವವಾದ್ದರಿಂದ, ಅದನ್ನು ನೇರವಾಗಿ ಪರೀಕ್ಷಿಸಿ ಅಧ್ಯಯನ ಮಾಡುವುದು ಅಸಾಧ್ಯ. ಹೀಗಾಗಿ ಅನುಭೂತಿಯನ್ನು ಅಧ್ಯಯನ ಮಾಡಲು ಇಚ್ಛಿಸುವವರು ಅನುಭಾವಿಗಳ ಸ್ವಂತ ಅನುಭವ ವೃತ್ತಾಂತ, ಆತ್ಮಚರಿತ್ರೆ ಮತ್ತು ಜೀವನಚರಿತ್ರೆಗಳಿಗೆ ಮೊರೆಹೋಗಬೇಕು. ಅಥವಾ ಅಂಥ ಅನುಭವವನ್ನು ಸ್ವತಃ ತಾವೇ ಪಡೆದುಕೊಳ್ಳಬೇಕು.**

ಈ ವ್ಯಾಖ್ಯಾನದ ಪ್ರಕಾರ, ಅನುಭೂತಿಯನ್ನು, ಅನುಭಾವಿಗಳ ಸ್ವಂತ ಅನುಭವದ ಮೂಲಕವಷ್ಟೇ ತಿಳಿದುಕೊಳ್ಳಲು ಸಾಧ್ಯ. ಈ ಸಂದರ್ಭದಲ್ಲಿ, ಹಿಂದೂ ಸಂಪ್ರದಾಯವು ಸೃಷ್ಟಿಸಿದ ನೂರಾರು ಅನುಭಾವಿಗಳನ್ನು ನಾವು ಉಲ್ಲೇಖಿಸಬಹುದು. ಪ್ರಾಚೀನ ವೈದಿಕ ಮುನಿಗಳಿಂದ ಹಿಡಿದು, ಆಧುನಿಕ ಕಾಲದ ಅನುಭಾವಿಗಳಾದ ಶ್ರೀರಾಮಕೃಷ್ಣ, ಶ್ರೀರಮಣ ಮಹರ್ಷಿ ಮತ್ತು ಶ್ರೀಅರವಿಂದರು – ಇವರೆಲ್ಲರೂ ಹಿಂದೂಧರ್ಮದಲ್ಲಿ ಅಡಕವಾಗಿರುವ ಅನುಭೂತಿ ತತ್ತ್ವಗಳ ಜೀವಂತ ಪ್ರಮಾಣಪುರುಷರಾಗಿದ್ದಾರೆ. ಅವರೆಲ್ಲರ ವಿಷಯದಲ್ಲಿ ಸಮಾನವಾಗಿರುವ ಮಹತ್ವದ ಸಂಗತಿಯೆಂದರೆ, ಅವರೆಲ್ಲರ ಅಸೀಮ ಪ್ರೇಮ ಮತ್ತು ಸಂತಪ್ತ ಮಾನವತೆಯೆಡೆಗೆ ಅವರಿಗಿದ್ದ ಅಪಾರ ಅನುಕಂಪ. ಹಿಂದೂಧರ್ಮದ ಇತಿಹಾಸವು ಇಂಥ ಜ್ಯೋತಿಪುರುಷರ ಯಶೋಗಾಥೆಗಳಿಂದ ಬೆಳಗುತ್ತಿದೆ. ಆ ಎಲ್ಲ ಪುಣ್ಯಪುರುಷರ ನಡುವೆ ಶ್ರೀರಾಮಕೃಷ್ಣರು ಹಿಂದೂಧರ್ಮದ ಅಖಂಡ ಸಾರತತ್ತ್ವವನ್ನು ಪ್ರತಿನಿಧಿಸುತ್ತಾರೆ.

ಶ್ರೀರಾಮಕೃಷ್ಣರ ಜೀವನವನ್ನು ಲೋಕೋತ್ತರ ಘಟನೆಯೆಂದು ಪ್ರಸಿದ್ಧ ಬರಹಗಾರ ಕ್ರಿಸ್ಟೋಫರ್ ಇಶರ್‌ಹುಡ್ ಬಣ್ಣಿಸುತ್ತಾರೆ. ಇಂಗ್ಲಿಷಿನಲ್ಲಿ ಅದನ್ನು Phenomenon ಎಂದು ಹೆಸರಿಸುತ್ತಾರೆ. ಈ ಪದಕ್ಕೆ ಇಂಗ್ಲಿಷ್ ನಿಘಂಟುವಿನಲ್ಲಿ ಮೂರು ಬಗೆಯ ಅರ್ಥಗಳಿವೆ: ೧. ಪರೀಕ್ಷಿಸಬಹುದಾದ ಸಂಗತಿ ೨. ಆಶ್ಚರ್ಯಕರ ಅಥವಾ ಅದ್ಭುತವಾದುದು ೩. ಪ್ರತಿಭಾನ್ವಿತವಾದುದು ಅಥವಾ ಅತಿಶಯ ಬುದ್ಧಿಶಕ್ತಿಯುಳ್ಳದ್ದು. ಈ ಎಲ್ಲ ಲಕ್ಷಣಗಳೂ ಶ್ರೀರಾಮಕೃಷ್ಣರ ಜೀವನ ಮತ್ತು ವ್ಯಕ್ತಿತ್ವಕ್ಕೆ ಅನುರೂಪವಾಗಿ ಹೊಂದುತ್ತವೆ. ಅವರ ಜೀವನವು ಒಂದು ತೆರೆದಿಟ್ಟ ಗ್ರಂಥದಂತೆ ಇತ್ತು. ಅದರ ಎಲ್ಲ ಘಟನೆಗಳನ್ನೂ ಪರೀಕ್ಷಿಸಬಹುದಾಗಿತ್ತು. ಅದೇ ಸಮಯದಲ್ಲಿ, ಕಣ್ಣಿಗೆ ಕಾಣುತ್ತಿದ್ದ ಆ ಘಟನೆಗಳು ಆಶ್ಚರ್ಯಕರವೂ ಅದ್ಭುತವೂ ಆಗಿದ್ದವು; ಅಲೌಕಿಕವೂ, ಅಸಾಮಾನ್ಯವೂ ಆಗಿದ್ದವು. ಇವುಗಳಿಂದ, ಶ್ರೀರಾಮಕೃಷ್ಣರ ಅಸೀಮ ಏಕಾಗ್ರ ಚಿತ್ತತೆ ಮತ್ತು ಅಪೂರ್ವ ಆಧ್ಯಾತ್ಮಿಕ ಪ್ರತಿಭೆಗಳು ಹೊರಹೊಮ್ಮುವುದನ್ನು ಕಾಣಬಹುದಿತ್ತು. ಇವೆಲ್ಲವೂ, ಅವರು ಒಬ್ಬ ನಿಜವಾದ ಅನುಭಾವಿ ಮತ್ತು ಮಹಾನ್ ಸಂತರೆನ್ನುವುದನ್ನು ಸ್ಪಷ್ಟಪಡಿಸುತ್ತವೆ. ಒಬ್ಬ ನೈಜ ಅನುಭಾವಿಯನ್ನು ನಿರ್ಧರಿಸುವುದಕ್ಕೆ, ಶ್ರೀರಾಮಕೃಷ್ಣರಲ್ಲಿ ಕಂಡುಬರುವ ಈ ಲಕ್ಷಣಗಳೇ ಮಾನದಂಡವಾಗಿವೆ.

ಹೀಗೆ **ಅನುಭಾವಿಗಳು** ಮತ್ತು ಅವರ ಜೀವನದಲ್ಲಿ ಕಂಡುಬರುವ **ಉನ್ನತ ಅನುಭೂತಿ** – ಇವೆರಡೂ ಹಿಂದೂಧರ್ಮದ ಆಧ್ಯಾತ್ಮಿಕ ಇತಿಹಾಸದ ಶಿಖರಗಳಂತಿವೆ. ವಿಶ್ವದ ಯಾವ ಧಾರ್ಮಿಕ ಸಂಪ್ರದಾಯದಲ್ಲೂ ಕಂಡುಬರದ ಶ್ರೇಷ್ಠ ಮಟ್ಟದ, ವೈವಿಧ್ಯಮಯವಾದ ಮತ್ತು ಎಲ್ಲಕ್ಕೂ ಹೆಚ್ಚಾಗಿ, ಉದಾರವಾದ ವಿಶ್ವವ್ಯಾಪಕ ದೃಷ್ಟಿಯ ಭಗವದನುಭೂತಿಯನ್ನು ಹಿಂದೂಧರ್ಮದಲ್ಲಿ ನೋಡುತ್ತೇವೆ. ಇದೇ ಹಿಂದೂಧರ್ಮದ ಸಾರಸತ್ವವೂ ಆಗಿದೆ.

⌘

# ರಾಷ್ಟ್ರ ಜಾಗೃತಿಯ ಹರಿಕಾರ ಸ್ವಾಮಿ ವಿವೇಕಾನಂದ

ಸ್ವಾಮಿ ಭಜನಾನಂದ

*(ಹಿಂದಿನ ಸಂಚಿಕೆಯಿಂದ)*

### ೭. ಜೀವನವಿಧಾನವಾಗಿ ಸೇವಾಕಾರ್ಯ

೧೯ನೆಯ ಶತಮಾನದ ಭಾರತೀಯ ಜಾಗೃತಿಗೆ ಸ್ವಾಮಿ ವಿವೇಕಾನಂದರ ಅತ್ಯಂತ ಪ್ರಮುಖವಾದ ಕೊಡುಗೆಯೆಂದರೆ ಸೇವಾಕಾರ್ಯವನ್ನು ಒಂದು ಜೀವನವಿಧಾನವಾಗಿ ಸ್ಥಾಪನೆಗೊಳಿಸಿದ್ದು. ಸ್ವಾಮೀಜಿ ಒತ್ತಿಹೇಳುವ ಹಾಗೆ, 'ತ್ಯಾಗ ಮತ್ತು ಸೇವೆ'ಗಳು ಯಾವತ್ತೂ ಭಾರತೀಯ ಸಂಸ್ಕೃತಿಯ ಎರಡು ಪ್ರಧಾನ ಲಕ್ಷಣಗಳಾಗಿವೆ. ಆದರೆ ಸ್ವಾಮೀಜಿಯ ಸೇವಾದರ್ಶವು ಕೆಲವು ವಿಶಿಷ್ಟ ಅಂಶಗಳನ್ನು ಹೊಂದಿದೆ:

ಅ. ಮೊದಲನೆಯದಾಗಿ, ಸ್ವಾಮೀಜಿಯವರ ಪ್ರಕಾರ, ಸೇವೆಯೆಂದರೆ ಆಗಾಗ್ಗೆ ಕೈಗೊಳ್ಳುವ ದಾನಕ್ರಿಯೆಗಳಲ್ಲ. ಅದು ಸಮಾಜವನ್ನು ಕುರಿತು ನಮ್ಮ ಸಾಮಾನ್ಯ ಧೋರಣೆ, ಜೀವನ ವಿಧಾನ. ಸ್ವಾಮೀಜಿ ಹೇಳಿದ ಹಾಗೆ, "ಯಾರು ಇತರರಿಗಾಗಿ ಬದುಕುತ್ತಾರೋ, ಅವರು ಮಾತ್ರವೇ ಜೀವಿಸುತ್ತಾರೆ. ಉಳಿದವರು ಬದುಕಿರುವುದಕ್ಕಿಂತಲೂ ಹೆಚ್ಚಾಗಿ ಸತ್ತಂತೆ ಇರುತ್ತಾರೆ."

ಆ. ಎರಡನೆಯದಾಗಿ, ಸ್ವಾಮೀಜಿ ನೈತಿಕತೆಯನ್ನು ನಿಸ್ವಾರ್ಥತೆಯ ಜೊತೆಗೆ ಸಮೀಕರಿಸಿದರು. ಈ ಬಗ್ಗೆ ಅವರು ಹೀಗೆ ಹೇಳುತ್ತಾರೆ: "ನೈತಿಕತೆಯ ಬಗ್ಗೆ ನೀಡಬಹುದಾದ ಒಂದೇ ವ್ಯಾಖ್ಯಾನವೆಂದರೆ ಇದು: 'ಯಾವುದು ಸ್ವಾರ್ಥವೋ ಅದು ಅನೈತಿಕತೆ, ಯಾವುದು ನಿಸ್ವಾರ್ಥವಾದುದೋ ಅದು ನೈತಿಕತೆ.' "

ಇ. ಇದೇ ಸಮಯದಲ್ಲಿ 'ಸೇವೆ' ಎನ್ನುವುದು ಬರಿಯ ನೈತಿಕ ಪ್ರಕ್ರಿಯೆಯಲ್ಲ; ಅದೊಂದು ಆಧ್ಯಾತ್ಮಿಕ ಸಾಧನೆ. ಅದರ ಗುರಿ ಭಗವತ್ಸಾಕ್ಷಾತ್ಕಾರ. ಅದೊಂದು ಯೋಗ, ಕರ್ಮಯೋಗ.

ಈ. ನೈತಿಕ ನಿರ್ಬಂಧದಿಂದಲೋ, ಕರ್ತವ್ಯವೆಂದೋ ಅಥವಾ ಅನುಕಂಪದಿಂದಲೋ ಮಾಡುವುದನ್ನು 'ಸೇವೆ' ಎನ್ನಲಾಗದು. ಸೇವೆಯೆಂಬುದು ಪರಮಾತ್ಮನಲ್ಲಿ ಜೀವಾತ್ಮನ ತಾದಾತ್ಮ್ಯದ ಸಹಜ ಅಭಿವ್ಯಕ್ತಿ. ಹೀಗಾಗಿ ಮಾನವಸೇವೆಯೇ ಭಗವಂತನ ಸೇವೆ.

ಉ. ಸ್ವಾಮಿ ವಿವೇಕಾನಂದರ ಸೇವಾ ಪರಿಕಲ್ಪನೆಯ ಇನ್ನೊಂದು ಲಕ್ಷಣವೆಂದರೆ ಅದರ ವಿಶ್ವವ್ಯಾಪಕತೆ – ಜಾತಿ, ಧರ್ಮ ಮತ್ತು ಜನಾಂಗಗಳ ಭೇದಭಾವವಿಲ್ಲದೆ ಎಲ್ಲರನ್ನೂ ಒಳಗೊಳ್ಳುವ ಸೇವಾಭಾವನೆ.

ಊ. ಲೌಕಿಕತೆ ಮತ್ತು ಧಾರ್ಮಿಕತೆಗಳ ನಡುವೆ ಯಾವುದೇ ತಾರತಮ್ಯ ಇಲ್ಲದಿರುವುದು. ಸ್ವಾಮಿ ವಿವೇಕಾನಂದರ ಪ್ರಕಾರ ಎಲ್ಲ ರೀತಿಯ ಸೇವೆಯೂ ಪವಿತ್ರವೇ, ಧಾರ್ಮಿಕವೇ.

ಋ. **ಬಡಜನರ ಕಡೆಗೆ ಗಮನ:** ಸೇವೆಯು ವಿಶ್ವವ್ಯಾಪಕವಾದರೂ, ಬಡವರು, ದಲಿತರು ಮತ್ತು ಉಪೇಕ್ಷಿತರ ಕಡೆಗೆ ವಿಶೇಷ ಗಮನವನ್ನು ನೀಡಬೇಕು ಎಂಬುದು ಸ್ವಾಮಿ ವಿವೇಕಾನಂದರ ಅಭಿಪ್ರಾಯವಾಗಿತ್ತು.

ಸ್ವಾಮಿ ವಿವೇಕಾನಂದರ ಸೇವಾದರ್ಶವು ಸಂಕಷ್ಟದಲ್ಲಿರುವ ಮಾನವತೆಯ ಸೇವೆಗೆ ತಮ್ಮ ಜೀವನವನ್ನು ಮುಡಿಪಾಗಿಡಲು ಸಾವಿರಾರು ಜನರನ್ನು ಪ್ರೇರೇಪಿಸಿತು. ಭಾರತವು ಸ್ವತಂತ್ರವಾದ ನಂತರ ಸ್ವಾಮಿ ವಿವೇಕಾನಂದರ ಪ್ರೇರಕ ನುಡಿಗಳಿಂದ ಪ್ರತ್ಯಕ್ಷವಾಗಿ ಅಥವಾ ಅಪರೋಕ್ಷವಾಗಿ ಸ್ಫೂರ್ತಿಪಡೆದ ನೂರಾರು ಸ್ವಯಂಸೇವಕ ಸೇವಾ ಸಂಘಟನೆಗಳು ಅಸ್ತಿತ್ವಕ್ಕೆ ಬಂದಿವೆ.

### ೮. ಸ್ವಾಮಿ ವಿವೇಕಾನಂದರ ಶಕ್ತಿಸಂದೇಶ

ಸ್ವಾಮಿ ವಿವೇಕಾನಂದರ ಸಂದೇಶಗಳಲ್ಲಿ ಪ್ರಸಿದ್ಧವಾದವು ಮತ್ತು ವ್ಯಾಪಕವಾಗಿ ಅಧ್ಯಯನ ಮಾಡಲ್ಪಡುವುವೆಂದರೆ ಶಕ್ತಿ ಮತ್ತು ಧೈರ್ಯಕ್ಕೆ ಸಂಬಂಧಪಟ್ಟವು. ಪಾಶ್ಚಾತ್ಯ ತತ್ತ್ವಶಾಸ್ತ್ರಜ್ಞನಾದ ನೀಷೆಯ ನಂತರ, ಯಾವ ಜಾಗತಿಕ ಚಿಂತಕನೂ ಸ್ವಾಮೀಜಿಯವರಂತೆ ಪ್ರಬಲ, ಸ್ಫೂರ್ತಿದಾಯಕ ಮತ್ತು ಉದಾತ್ತವಾದ ಶಕ್ತಿಸಂದೇಶವನ್ನು ಇದುವರೆಗೂ ನೀಡಿಲ್ಲವೆಂದೇ ಹೇಳಬೇಕು. ಆದರೆ ನೀಷೆ ಮತ್ತಿತರರ ಬೋಧನೆಗಳಿಗಿಂತ ಸ್ವಾಮೀಜಿಯವರ ಸಂದೇಶವು ಮೂರು ವಿಧಗಳಲ್ಲಿ ವಿಭಿನ್ನವಾಗಿದೆ: ಮೊದಲನೆಯದಾಗಿ, ಸ್ವಾಮೀಜಿಯವರು ಬೋಧಿಸಿದ ಶಕ್ತಿಭಾವನೆಯು ತನಗೆ

ತಾನೇ ಒಂದು 'ಗುರಿ'ಯಲ್ಲ. ಇದಕ್ಕೆ ಬದಲಾಗಿ, ಅದು ಸತ್ಯ, ಅಹಿಂಸೆ, ಸಹನೆ, ಪ್ರೀತಿ, ನ್ಯಾಯನಿರ್ಧಾರ, ಸಮಾನತೆ ಮುಂತಾದ ಇತರ ಗುಣಗಳಿಗೆ ಆಧಾರ ಅಥವಾ ಸಾಧನ. ಎರಡನೆಯದಾಗಿ ಸ್ವಾಮೀಜಿ, ವ್ಯಕ್ತಿಗಳು ಬೆಳೆಸಿಕೊಳ್ಳಬೇಕಾದ ಶಕ್ತಿಭಾವನೆಯನ್ನು ಪ್ರತಿಪಾದಿಸಿದರಾದರೂ, ಅವರ ಪ್ರಮುಖ ಧ್ಯೇಯ ರಾಷ್ಟ್ರೀಯ ಶಕ್ತಿಯನ್ನು ಹೆಚ್ಚಿಸುವುದೇ ಆಗಿತ್ತು. ಅಂಥ ಶಕ್ತಿಭಾವನೆ ಮಾತ್ರ ಭಾರತವನ್ನು ಒಂದು ಪ್ರಬಲ ಮತ್ತು ಮಹಾನ್ ರಾಷ್ಟ್ರವನ್ನಾಗಿ ಪರಿವರ್ತಿಸಬಲ್ಲುದು. ಮೂರನೆಯದಾಗಿ ದೈಹಿಕ ಮತ್ತು ಮಾನಸಿಕ ಶಕ್ತಿಯ ಆವಶ್ಯಕತೆಯ ಬಗ್ಗೆ ಸ್ವಾಮೀಜಿ ಎತ್ತಿಹೇಳಿದರಾದರೂ, ಅವೆಲ್ಲವೂ ಆಧ್ಯಾತ್ಮಿಕ ಶಕ್ತಿಗೆ ಅಧೀನವಾಗಿದೆ ಎಂದೇ ಪ್ರತಿಪಾದಿಸಿದರು. ಹಾಗೆಯೇ, ತಮ್ಮ ಪ್ರವಚನಗಳಲ್ಲಿ ಈ ಆಧ್ಯಾತ್ಮಿಕ ಶಕ್ತಿಯ ಬಗ್ಗೆಯೇ ಮತ್ತೆ ಮತ್ತೆ ಪ್ರಸ್ತಾಪಿಸಿದರು.

ಕೇನೋಪನಿಷತ್ತಿನ ಋಷಿಯೊಬ್ಬರು ಹೀಗೆ ಉದ್ಘೋಷಿಸುತ್ತಾರೆ: **'ಆತ್ಮನಾ ವಿಂದತೇ ವೀರ್ಯಂ'** – 'ಆತ್ಮನಿಂದ ಶಕ್ತಿಯನ್ನು ಗಳಿಸಿಕೊಳ್ಳಲು ಸಾಧ್ಯ.' ಉಪನಿಷತ್ತಿನ ಋಷಿಗಳೆಲ್ಲರೂ ಈ ಆಧ್ಯಾತ್ಮಿಕ ಶಕ್ತಿಯನ್ನು ತಮ್ಮಲ್ಲಿ ಪ್ರಕಟಪಡಿಸಿದ್ದರು. ವೈದಿಕಯುಗದ ನಂತರ, 'ಆತ್ಮ ಮಾತ್ರವೇ ಶಕ್ತಿಯ ಆಧಾರ'ವೆಂದು ಪ್ರತಿಪಾದಿಸಿದ ಏಕೈಕ ಋಷಿಸದೃಶರೆಂದರೆ ಸ್ವಾಮಿ ವಿವೇಕಾನಂದರೇ. ಶಂಕರಾಚಾರ್ಯರು ಮತ್ತು ಅವರ ನಂತರದ ವೇದಾಂತ ಬೋಧಕರು ಮನಸ್ಸೇ ಶಕ್ತಿಯ ಆಧಾರವೆಂದು ಪರಿಗಣಿಸಿದ್ದರು. ಆದರೆ, ಆತ್ಮವೇ ಆಂತರಂಗಿಕ ಶಕ್ತಿಯ ನೈಜ ಆಕರವೆಂಬ ವೈದಿಕ ಆದರ್ಶವನ್ನು ಆಧುನಿಕ ಕಾಲದಲ್ಲಿ ಬೆಳಕಿಗೆ ತಂದ ಕೀರ್ತಿ ಸ್ವಾಮಿ ವಿವೇಕಾನಂದರಿಗೆ ಮಾತ್ರವೇ ಸಲ್ಲುತ್ತದೆ. ಈ ಉಪನಿಷತ್ತಿನ ಪರಿಕಲ್ಪನೆಗೆ ಸ್ವಾಮೀಜಿ, ಶ್ರೀಶಂಕರಾಚಾರ್ಯರು ಪ್ರತಿಪಾದಿಸಿದ ಮಾಯೆ ಅಥವಾ ಅನಾದಿಯಾದ ಅವಿದ್ಯೆಯ ಭಾವನೆಯನ್ನೂ ಸೇರಿಸಿದರು. ವ್ಯಕ್ತಿಗತ ಜೀವಾತ್ಮವು 'ಬ್ರಹ್ಮನ್' ಅಥವಾ 'ಭಗವಂತ' ಎನ್ನುವ ಪರಮಾತ್ಮಚೈತನ್ಯದ ಅವಿಭಾಜ್ಯ ಅಂಗ ಅಥವಾ ಪ್ರತಿಫಲನವಾಗಿದೆ. ಪ್ರತಿಯೊಬ್ಬ ಜೀವಿಯ ಹಿನ್ನೆಲೆಯಲ್ಲಿಯೂ ಭಗವಂತನ ಅನಂತ ಶಕ್ತಿಯಿದೆ ಎನ್ನುವುದು ಇದರಿಂದ ದೃಢವಾಗುತ್ತದೆ. ಆದರೆ ಅವಿದ್ಯೆಯ ದೆಸೆಯಿಂದ ಈ ಸತ್ಯವನ್ನು ಜನರು ಅರಿತುಕೊಂಡಿಲ್ಲ. ಆದ್ದರಿಂದಲೇ ಸ್ವಾಮೀಜಿ ಮಾನವ ವ್ಯಕ್ತಿತ್ವವನ್ನು 'ಅಂತಸ್ಥವಾಗಿರುವ ದಿವ್ಯತೆ' (Potentially Divine) ಎಂದು ಬಣ್ಣಿಸುತ್ತಾರೆ. ಹಾಗೆಯೇ ಈ ಆಂತರಿಕ ದಿವ್ಯತೆಯನ್ನು, ಅವಿದ್ಯೆಯ ಆವರಣವನ್ನು ತೆಗೆಯುವ ಮೂಲಕ ಪ್ರಕಟಗೊಳಿಸುವುದೇ 'ಆಧ್ಯಾತ್ಮಿಕ ಜೀವನ' ಎಂದು ಅವರು ಅಭಿಪ್ರಾಯಪಡುತ್ತಾರೆ. ಈ ಅವಿದ್ಯೆಯ ತೆರೆಯು ಅನಾವರಣಗೊಳ್ಳುವ ವಿಧಾನವೇ ಯೋಗ. ಸ್ವಾಮೀಜಿಯವರು ತಮ್ಮ ಪ್ರವಚನಗಳು ಮತ್ತು ಬರಹಗಳಲ್ಲಿ ವಿವಿಧ ಬಗೆಗಳಲ್ಲಿ ವಿವರಿಸಿದ ಕೇಂದ್ರತತ್ತ್ವವೇ ಇದು.

ಸ್ವಾಮೀಜಿ ಪ್ರತಿಪಾದಿಸಿದ ಆತ್ಮಶ್ರದ್ಧೆ ಮತ್ತು ಆಂತರಿಕ ಶಕ್ತಿಯ ಸಿದ್ಧಾಂತವು ಜೀವಿಯಲ್ಲಿನ ಸುಪ್ತ ದಿವ್ಯತೆಯ ಪರಿಕಲ್ಪನೆಯನ್ನೇ ಆಧರಿಸಿದೆ ಎನ್ನಬಹುದು. ದಕ್ಷಿಣಭಾರತದ ನಗರವೊಂದರಲ್ಲಿ ಮಾಡಿದ ಪ್ರವಚನದಲ್ಲಿ ಸ್ವಾಮೀಜಿ ಹೀಗೆ ಕರೆನೀಡುತ್ತಾರೆ: "ಓ ಆಧುನಿಕ ಹಿಂದೂಗಳೇ, ಸಮ್ಮೋಹಿನಿಯಿಂದ ಹೊರಬನ್ನಿ. ಇದರ ಮಾರ್ಗವು ನಿಮ್ಮ ಪವಿತ್ರಗ್ರಂಥಗಳಲ್ಲಿಯೇ ಕಂಡುಬರುತ್ತದೆ. ನಿಮಗೆ ನೀವು ಬೋಧಿಸಿಕೊಳ್ಳಿ, ಪ್ರತಿಯೊಬ್ಬನಿಗೂ ಆತನ ನೈಜ ಸ್ವಭಾವವನ್ನು ಬೋಧಿಸಿ. ಮಲಗಿರುವ ಆತ್ಮವನ್ನು ಕೂಗಿ ಕರೆಯಿರಿ. ಅದು ಹೇಗೆ ಜಾಗೃತಿಗೊಳ್ಳುವುದೆಂದು ನೀವೇ ನೋಡಿ. ಸುಪ್ತಾತ್ಮವು ಸ್ವಪ್ರಜ್ಞೆಯ ಚಟುವಟಿಕೆಯಲ್ಲಿ ಮೇಲೆದ್ದಾಗ, ಶಕ್ತಿ ಬರುವುದು, ವೈಭವ ಬರುವುದು, ಒಳಿತು ಹೊರಹೊಮ್ಮುವುದು, ಪವಿತ್ರತೆ ಮೂಡುವುದು ಮತ್ತು ನಾವು ಯಾವುದನ್ನು ಉತ್ಕೃಷ್ಟವೆಂದು ಕರೆಯುವೆವೋ ಅವೆಲ್ಲವೂ ಪ್ರಕಟವಾಗುವವು."

ಇನ್ನೊಂದು ಪ್ರವಚನದಲ್ಲಿ ಸ್ವಾಮೀಜಿ ಹೀಗೆ ಹೇಳುತ್ತಾರೆ: "ಜಗತ್ತಿನ ಎಲ್ಲ ಶಕ್ತಿಗಳೂ ಈಗಾಗಲೇ ನಮ್ಮದಾಗಿವೆ. ನಮ್ಮ ಕಣ್ಣುಗಳ ಮುಂದೆ ಕೈಯನ್ನು ಒಡ್ಡಿಕೊಂಡು ಅಂಧಕಾರವೆಂದು ಅಳುತ್ತಿರುವವರು ನಾವೇ... ಕೈಯನ್ನು ಆಚೆಗೆ ಸರಿಸಿರಿ. ಅದೋ, ಮೊದಲಿನಿಂದಲೂ ಬೆಳಕೇ ಇದ್ದುದನ್ನು ಕಾಣುವಿರಿ. ಅಂಧಕಾರವೆನ್ನುವುದು ಎಂದೆಂದೂ ಇರಲೇ ಇಲ್ಲ. ದುರ್ಬಲತೆಯೆನ್ನುವುದು ಕೂಡ ಎಂದೆಂದಿಗೂ ಇರಲೇ ಇಲ್ಲ. ದುರ್ಬಲರೆಂದು ಅಳುವ ನಾವು ನಿಜಕ್ಕೂ ಮೂರ್ಖರೇ ಸರಿ. ಅಪವಿತ್ರರೆಂದು ಅಳುವ ನಾವು ನಿಜಕ್ಕೂ ಮೂರ್ಖರೇ ಸರಿ. ಮತ್ತು, ಯಾವತ್ತೂ 'ಇಲ್ಲ' ಎಂದು ಹೇಳದಿರು. ಯಾವತ್ತೂ 'ನನಗೆ ಆಗದು' ಎಂದು ಹೇಳದಿರು. ಏಕೆಂದರೆ ನೀನು ಅನಂತನು. ಕಾಲ ಮತ್ತು ದೇಶಗಳು ಕೂಡ ನಿನ್ನ ಸ್ವಭಾವಕ್ಕೆ ಹೋಲಿಸಿದಲ್ಲಿ ಏನೂ ಅಲ್ಲ. ನೀನು ಏನು ಬೇಕಾದರೂ ಮಾಡಬಲ್ಲೆ, ಎಲ್ಲವನ್ನೂ ಮಾಡಬಲ್ಲೆ. ಏಕೆಂದರೆ ನೀನು ಸರ್ವಶಕ್ತನು." ಈ ಬಗೆಯ ಉದ್ಘೋಷಗಳು ಎಲ್ಲೆಲ್ಲಿಯೂ, ಅದರಲ್ಲೂ ಭಾರತದಲ್ಲಿ, ಜನರ ಮನಸ್ಸನ್ನು ಕಿಚ್ಚೆಬ್ಬಿಸಿದವು. ಅವರ ಹೃದಯಗಳಲ್ಲಿ ಆತ್ಮವಿಶ್ವಾಸ, ಧೈರ್ಯ ಮತ್ತು ಆಶೆಯ ಭಾವನೆಗಳನ್ನು ಮೂಡಿಸಿದವು. ಸ್ವಾಮೀಜಿಯವರ ಶಕ್ತಿಪೂರಿತ ನುಡಿಗಳು ದೀರ್ಘಕಾಲದ ನಿದ್ದೆಯಿಂದ ಭಾರತದ ಜನಮಾನಸವನ್ನು ಜಾಗೃತಗೊಳಿಸುವಲ್ಲಿ ಮತ್ತು ಅವರನ್ನು ಬ್ರಿಟಿಷರ ದಾಸ್ಯದಿಂದ ಮುಕ್ತಗೊಳಿಸುವಲ್ಲಿ ಬಹುಮಟ್ಟಿಗೆ ಸಹಾಯಕವಾದವು.

### ೯. ಸಾಮಾಜಿಕ ಸಮಾನತೆ ಮತ್ತು ಸಾಮಾಜಿಕ ನ್ಯಾಯಗಳ ಸಂದೇಶ:

ಸ್ವಾಮಿ ವಿವೇಕಾನಂದರು ಸಾಮಾಜಿಕ ಸಮಾನತೆ ಮತ್ತು ಸಾಮಾಜಿಕ ನ್ಯಾಯಗಳ ಮೊಟ್ಟಮೊದಲ ಪ್ರತಿಪಾದಕರಲ್ಲಿ ಒಬ್ಬರು. ಬೇರೆಲ್ಲ ದೇಶಗಳಲ್ಲಿ ಸಾಮಾಜಿಕ ಅಸಮಾನತೆಯು ವರ್ಗಭೇದದಿಂದ ಉಂಟಾಗುತ್ತದೆ. ಆದರೆ ಭಾರತದಲ್ಲಿ ಇದು ಜಾತಿಭೇದದಿಂದ ಉಂಟಾಗುತ್ತದೆ. ಜಾತಿಯೆನ್ನುವುದು ಒಂದು ಬಗೆಯ ಸಾಮಾಜಿಕ ವರ್ಗೀಕರಣ. ಇಲ್ಲಿ ವ್ಯಕ್ತಿಯೊಬ್ಬನ ಸ್ಥಾನವು ಜನ್ಮದಿಂದ ಅಳೆಯಲ್ಪಡುತ್ತದೆ. ಹಾಗೂ ಈ ಶ್ರೇಣಿ ವ್ಯವಸ್ಥೆಯಲ್ಲಿ ಮೇಲೇರುವುದಕ್ಕೆ ಯಾವ ಅವಕಾಶವೂ ಇರುವುದಿಲ್ಲ. ಹಿಂದೂ ಸಭ್ಯತೆ ಮತ್ತು ಹಿಂದೂ ಮಾನಸದಲ್ಲಿ ಆಳವಾಗಿ ಬೇರೂರಿರುವ ಸಂಸ್ಥೆಯಿದು ಎಂಬುದನ್ನು ಸ್ವಾಮೀಜಿ ಚೆನ್ನಾಗಿ ತಿಳಿದಿದ್ದರು. ಹಾಗೂ ಇದನ್ನು ತೊಡೆದುಹಾಕಲು ಪ್ರಯತ್ನಿಸಿದ ಹಿಂದಿನ ಸುಧಾರಕರು ಮತ್ತೊಂದು ಜಾತಿಯೊಂದನ್ನು ಹುಟ್ಟುಹಾಕಲು

ಮಾತ್ರವೇ ಶಕ್ತರಾದರು ಎನ್ನುವುದನ್ನೂ ಅವರು ಅರಿತಿದ್ದರು. ಜಾತಿ ಸಮಸ್ಯೆಗೆ ಸ್ವಾಮೀಜಿಯವರ ಪರಿಹಾರವು ಮೂರು ಸಿದ್ಧಾಂತಗಳ ಮೇಲೆ ಆಧಾರಿತವಾಗಿತ್ತು:

೧. ಮೊದಲಿಗೆ, ಸ್ವಾಮೀಜಿ 'ಜಾತಿ'ಯನ್ನು 'ಧರ್ಮ' ದಿಂದ ಪ್ರತ್ಯೇಕಿಸಿದರು. ಅವರ ಪ್ರಕಾರ, 'ಜಾತಿ' ಎನ್ನುವುದು ದುಡಿಮೆಯ ವಿಭಾಗದ ಆಧಾರದ ಮೇಲೆ ನೆಲೆಗೊಂಡ ಸಾಮಾಜಿಕ ಸಂಸ್ಥೆಯೇ ಹೊರತು ಒಂದು ಆಧ್ಯಾತ್ಮಿಕ ಸಂಸ್ಥೆಯಲ್ಲ.

೨. ಎರಡನೆಯದಾಗಿ, ಜಾತಿಪದ್ಧತಿಗೆ ಸ್ವಾಮೀಜಿಯವರ ಪರಿಹಾರ, ಈಗಾಗಲೇ ಮೇಲ್ವರ್ಗದಲ್ಲಿರುವವರನ್ನು ಕೆಳಕ್ಕೆ ಇಳಿಸು ವುದಾಗಿರಲಿಲ್ಲ. ಅದಕ್ಕೆ ಬದಲಾಗಿ, ಶಿಕ್ಷಣ ಮತ್ತು ಸಂಸ್ಕೃತಿಗಳ ಪ್ರಸಾರದ ಮೂಲಕ ಕೆಳವರ್ಗದವರನ್ನು ಉನ್ನತವರ್ಗದವರ ಮಟ್ಟಕ್ಕೆ ಏರಿಸುವುದೇ ಆಗಿತ್ತು. ಇದೊಂದು ದೀರ್ಘಾವಧಿಯ ಪ್ರಕ್ರಿಯೆ, ಸರಿ. ಆದರೆ, ಸ್ವಾಮೀಜಿ ಆಧ್ಯಾತ್ಮಿಕ ಸಮಾನತೆ ಮಾತ್ರವೇ ಸಾಮಾಜಿಕ ಸಮಾನತೆಯ ಆಧಾರವಾಗಬಲ್ಲುದು ಎನ್ನುವುದನ್ನು ಗುರುತುಮಾಡಿ ತೋರಿಸಿದರು. ಆತ್ಮನಿಗೆ ಯಾವುದೇ ಜಾತಿಯಿಲ್ಲ. ಎಲ್ಲ ಜೀವಿಗಳೂ ಪರಮಾತ್ಮನ ಅವಿಭಾಜ್ಯ ಅಂಗಗಳು. ಇದರರ್ಥ ಭಗವತ್ಸ್ವರೂಪರಾಗಿ ಎಲ್ಲರೂ ಒಂದೇ.

೩. ಮೂರನೆಯದಾಗಿ, ಜಾತಿ ಆಧಾರಿತ ಸವಲತ್ತುಗಳನ್ನು ಸ್ವಾಮೀಜಿ ಖಂಡಿಸಿದರು. ಉತ್ತಮ ಜಾತಿಯ ಜನರು ಸಂಪತ್ತು, ವಿದ್ಯಾಭ್ಯಾಸ ಮುಂತಾದ ಸೌಲಭ್ಯಗಳಿಗೆ ಹೆಚ್ಚು ಅವಕಾಶವನ್ನು ಹೊಂದಿದ್ದಾರೆ. ಇದಕ್ಕೆ ವಿರುದ್ಧವಾಗಿ, ನಿಜವಾಗಿಯೂ ಸಂಪತ್ತನ್ನು ಸೃಷ್ಟಿಸುವ ಕೆಳ ಜಾತಿಯವರಿಗೆ ಸಂಪತ್ತು ಮತ್ತು ಶಿಕ್ಷಣದ ಅವಕಾಶ ಗಳನ್ನು ನಿರಾಕರಿಸಲಾಗಿದೆ. ಈ ಪರಿಸ್ಥಿತಿಯನ್ನು ಸ್ವಾಮೀಜಿ ಕಟುವಾಗಿ ಟೀಕಿಸಿದರು. ಇದಲ್ಲದೆ ಅವರು ಇಂಥ ಉಪೇಕ್ಷಿತ ಜನರಿಗೆ ಪ್ರತ್ಯೇಕ ಧನಸಹಾಯ ಮತ್ತು ಬೌದ್ಧಿಕ ನೆರವನ್ನು ಕೂಡ ನೀಡಬೇಕೆಂದು ಒತ್ತಾಯಿಸಿದರು. (*ಆಧುನಿಕ ಭಾರತದಲ್ಲಿ ಸರ್ಕಾರವು ಮೀಸಲಾತಿ ನಿಯಮದ ಮೂಲಕ ಈ ಕಾರ್ಯವನ್ನು ಅನುಷ್ಠಾನಗೊಳಿಸುತ್ತಿದೆ.*)

### ೧೦. ಧರ್ಮಸಾಮರಸ್ಯ

ಸಾಮರಸ್ಯ ಮತ್ತು ಸಮ್ಮತಿಗಳು ಅತಿ ಪ್ರಾಚೀನ ಕಾಲದಿಂದಲೂ ಭಾರತೀಯ ಸಂಸ್ಕೃತಿಯ ವಿಶಿಷ್ಟ ಲಕ್ಷಣಗಳಾಗಿದ್ದವು. ಆದರೆ ಅದು ಇತರ ಧರ್ಮಗಳ ಸರಿಯಾದ ಪರಿಜ್ಞಾನದ ಮೇಲೆ ನೆಲೆಗೊಂಡಿರದ ಪ್ರಾರಂಭಿಕ ನಿಲುವಾಗಿತ್ತು. ನಿಜವಾದ ಧರ್ಮ ಸಾಮರಸ್ಯವೆನ್ನುವುದು ಸುಸಂಬದ್ಧವಾದ ಆಧ್ಯಾತ್ಮಿಕ ಸಿದ್ಧಾಂತ ಮತ್ತು ತಾತ್ತ್ವಿಕ ಪರಿಕಲ್ಪನೆ. ಅದರ ಆಧಾರಸ್ತಂಭಗಳೆಂದರೆ **ವಿವಿಧ ಧರ್ಮಗಳ ನೈಜ ಅನುಷ್ಠಾನ** ಮತ್ತು **ಧರ್ಮಸಾಮರಸ್ಯದ ಪರಿಪೂರ್ಣವಾದ ಅತೀಂದ್ರಿಯ ಅನುಭೂತಿ.** ಆಧುನಿಕ ಕಾಲದಲ್ಲಿ ಶ್ರೀರಾಮಕೃಷ್ಣರೇ ಇದರ ಮೊದಲನೆಯ ಪ್ರವರ್ತಕರು ಎನ್ನಬಹುದು. ಸ್ವಾಮಿ ವಿವೇಕಾನಂದರು ತಮ್ಮ ಗುರುದೇವರ ಸಂದೇಶವನ್ನು ಭಾರತದ ವಿವಿಧ ಭಾಗಗಳಲ್ಲಿ ಪ್ರಚುರಪಡಿಸಿದರು. ಹಾಗೆಯೇ ಅವರು ಶ್ರೀರಾಮಕೃಷ್ಣರ ಧರ್ಮಸಾಮರಸ್ಯದ ಸಿದ್ಧಾಂತದ ಆಧಾರದ ಮೇಲೆ ನಿಂತಿರುವ ಕೆಲವು ಸಂಬಂಧಿತ ವಿವರಣೆಗಳನ್ನೂ ನೀಡಿದ್ದಾರೆ. ಅವು ಹೀಗಿವೆ:

**೧. ಎಲ್ಲ ಜಾಗತಿಕ ಧರ್ಮಗಳೂ ಸತ್ಯವಾದುವು. ಏಕೆಂದರೆ ಅವೆಲ್ಲವೂ ಒಂದೇ ಪರಮಾರ್ಥವನ್ನು ಲಕ್ಷ್ಯವಾಗಿ ಹೊಂದಿವೆ.**

**೨. ಪ್ರತಿಯೊಂದು ಧರ್ಮವೂ ಈ ಜಗತ್ತಿನಲ್ಲಿ ತನ್ನದೇ ಆದ ವಿಶಿಷ್ಟ ಕಾರ್ಯವನ್ನು ನಿರ್ವಹಿಸುತ್ತದೆ.**

**೩. ಎಲ್ಲ ಧರ್ಮಗಳು ಕೂಡ ಅನಾದಿಯೂ ಸೀಮಾತೀತವೂ ಆದ ವಿಶ್ವಧರ್ಮದ ಅವಿಭಾಜ್ಯ ಅಂಗಗಳೇ ಆಗಿವೆ.**

**೪. ಯಾರೊಬ್ಬರೂ ತಮ್ಮ ಧರ್ಮವನ್ನು ಬದಲಾಯಿಸಿಕೊಳ್ಳ ಬೇಕಾದ ಅಗತ್ಯವಿಲ್ಲ.**

**೫. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಸ್ವಂತ ಧರ್ಮದಲ್ಲಿ ಭದ್ರವಾಗಿ ನೆಲೆಗೊಳ್ಳಬೇಕು. ಆದರೆ ಅದೇ ಸಮಯದಲ್ಲಿ, ಇತರ ಧರ್ಮಗಳ ಉತ್ತಮ ಮೌಲಿಕ ಅಂಶಗಳನ್ನು ಹಾರ್ದಿಕವಾಗಿ ಒಪ್ಪಿಕೊಳ್ಳಬೇಕು.**

**೬. ಧರ್ಮಸಾಮರಸ್ಯವು ಸಹಜವಾದ ಒಂದು ಪ್ರಕ್ರಿಯೆ. ಅದೇನೂ ಕೃತಕವಾಗಿ ಹುಟ್ಟಿಸಬೇಕಾದ ಸಂಗತಿಯಲ್ಲ. ಇದು ಈಗಾಗಲೇ ಅಸ್ತಿತ್ವದಲ್ಲಿರುವ ವಾಸ್ತವ ಸಂಗತಿ. ಮುಲ್ಲಾಗಳು, ಪುರೋಹಿತರು ಮತ್ತಿತರ ಧಾರ್ಮಿಕ ಮುಖಂಡರು ಈ ನೈಸರ್ಗಿಕ ಸಾಮರಸ್ಯವನ್ನು ತಮ್ಮ ಅಪ್ರಬುದ್ಧ ವಿಚಾರಗಳಿಂದ ಹದಗೆಡಿಸುತ್ತಿದ್ದಾರೆ, ಅಷ್ಟೇ.**

**ಅ.** ಭಾರತ ದೇಶದ ಒಂದು ಪ್ರಮುಖ ಅಂಗವಾಗಿರುವ ಇಸ್ಲಾಂ ಧರ್ಮದ ಅಸ್ತಿತ್ವವು ಐತಿಹಾಸಿಕ ತಥ್ಯವೆಂದು ಸ್ವಾಮೀಜಿ ಚೆನ್ನಾಗಿ ಅರಿತಿದ್ದರು. ಅದನ್ನು ಎಲ್ಲರೂ ಹೃತ್ಪೂರ್ವಕವಾಗಿ ಒಪ್ಪಿಕೊಳ್ಳಬೇಕೆಂದು ಅವರು ಆಶಿಸಿದ್ದರು. ಹಾಗೆಯೇ, ಇಸ್ಲಾಂ ಮತ್ತು ಹಿಂದೂಧರ್ಮಗಳ ಸಂಘಟಿತ ಶಕ್ತಿಯು ಭಾರತದ ಐಕ್ಯತೆ ಮತ್ತು ಶಕ್ತಿವರ್ಧನೆಗೆ ಅವಶ್ಯ ಎಂದೂ ಅವರು ಪರಿಗಣಿಸಿದ್ದರು. ತಮ್ಮ ಒಬ್ಬ ಮುಸ್ಲಿಂ ಅಭಿಮಾನಿಗೆ ಬರೆದ ಪತ್ರದಲ್ಲಿ ಅವರು ಹೀಗೆ ಹೇಳುತ್ತಾರೆ: "ನಮ್ಮ ಮಾತೃಭೂಮಿಗೆ, ಈ ಪರಿಸ್ಥಿತಿಯಲ್ಲಿ, ಹಿಂದೂಧರ್ಮ ಮತ್ತು ಇಸ್ಲಾಂಧರ್ಮ – ವೇದಾಂತದ ಮಿದುಳು ಮತ್ತು ಇಸ್ಲಾಂ ದೇಹ – ಇದರ ಬೆಸುಗೆಯೊಂದೇ ಆಶಾದಾಯಕ ಸಂಗತಿ. ನನ್ನ ಅಂತರಂಗದ ಕಣ್ಣುಗಳಿಂದ ನಾನು ನೋಡುತ್ತಿದ್ದೇನೆ – ವೈಭವಯುತವೂ ಅಜೇಯವೂ ಆದ ಪರಿಪೂರ್ಣ ಭವಿಷ್ಯಭಾರತವು ಇಂದಿನ ಅವ್ಯವಸ್ಥೆ ಮತ್ತು ಸಂಘರ್ಷಗಳ ನಡುವಿನಿಂದಲೇ ಒಡಮೂಡುವುದು."

**ಆ.** ಹೀಗಿದ್ದರೂ, ಅತೀಂದ್ರಿಯ ನೆಲೆಯಲ್ಲಿ ಎಲ್ಲ ಧರ್ಮಗಳೂ ತಮ್ಮ ಪ್ರತ್ಯೇಕ ಅಸ್ಮಿತೆಯನ್ನು ಕಳೆದುಕೊಂಡು ವಿಶ್ವಧರ್ಮವಾಗಿ ಒಗ್ಗೂಡುವವು. ಹೀಗಾಗಿ ಶ್ರೀರಾಮಕೃಷ್ಣ ಮತ್ತು ಸ್ವಾಮಿ ವಿವೇಕಾನಂದರು ಬೋಧಿಸಿದ ಧರ್ಮಸಾಮರಸ್ಯದ ಸಿದ್ಧಾಂತಕ್ಕೆ ಮೊಟ್ಟಮೊದಲ ಪ್ರಾಶಸ್ತ್ಯವನ್ನು ಭಾರತೀಯ ರಾಜಕೀಯ ಮುಖಂಡರು ನೀಡಬೇಕಾಗಿತ್ತು ಎಂದೆನಿಸುತ್ತದೆ. ಅದಕ್ಕೆ ಬದಲಾಗಿ ಅವರು ಹೃದಯಹೀನವೂ, ನಿರ್ವೀರ್ಯವೂ ಆದ 'ಧರ್ಮನಿರಪೇಕ್ಷತೆ'ಯನ್ನು, 'ಧರ್ಮಸಾಮರಸ್ಯ'ಕ್ಕೆ ಬದಲಾಗಿ ಅನುಸರಿಸಿದರು. ಈ ನಿರ್ಲಕ್ಷ್ಯವೇ ಭಾರತವು ಧರ್ಮದ ಆಧಾರದ

ಮೇಲೆ ಎರಡು ದೇಶಗಳಾಗಿ ವಿಭಜನೆ ಹೊಂದುವುದಕ್ಕೆ ಮುಂದೆ ಕಾರಣವಾಯಿತು.

## ೧೧. ಭಾರತದ ಸಾಂಸ್ಕೃತಿಕ ಏಕಾಂಗಿತನವನ್ನು ನಿವಾರಿಸಿದ್ದು

೧೯ನೆಯ ಶತಮಾನದಲ್ಲಿ ಕಂಡುಬಂದ ರಾಷ್ಟ್ರೀಯ ಜಾಗೃತಿಗೆ ಸ್ವಾಮಿ ವಿವೇಕಾನಂದರ ಇನ್ನೊಂದು ಕೊಡುಗೆಯನ್ನು ಇಲ್ಲಿ ಪ್ರಸ್ತಾಪಿಸುವುದು ಸೂಕ್ತವೆನಿಸುತ್ತದೆ: ಅದೆಂದರೆ ಜಗತ್ತಿನ ಇತರ ಭಾಗಗಳಿಂದ ಭಾರತದ ಒಬ್ಬಂಟಿತನವನ್ನು ಅಂತ್ಯ ಗೊಳಿಸಿದ್ದು. ಭಾರತದ ಅಧಃಪತನಕ್ಕೆ ಕಾರಣವಾದ ಮೂರು ಕಾರಣಗಳಲ್ಲಿ, ಅದು ಜಾಗತಿಕ ಸಮುದಾಯದಿಂದ ಪ್ರತ್ಯೇಕವಾದ ಅಸ್ಮಿತೆಯನ್ನು ಕಾಪಾಡಿಕೊಂಡಿದ್ದು ಕೂಡ ಒಂದು ಎಂದು ಸ್ವಾಮಿ ವಿವೇಕಾನಂದರು ಗುರುತುಮಾಡಿ ತೋರಿಸುತ್ತಾರೆ. (ಇನ್ನೆರಡು ಕಾರಣಗಳೆಂದರೆ, ಜನಸಾಮಾನ್ಯರನ್ನು ಕಡೆಗಣಿಸಿದ್ದು ಮತ್ತು ಮಹಿಳೆಯರನ್ನು ನಿರ್ಲಕ್ಷಿಸಿದ್ದು) ಈ ಬಗ್ಗೆ ಸ್ವಾಮೀಜಿ ಹೀಗೆ ಹೇಳುತ್ತಾರೆ:

"ಭಾರತದ ಸಂಕಷ್ಟ ಮತ್ತು ಅಧಃಪತನಗಳಿಗೆ ಕಾರಣವಾದ ಮುಖ್ಯಕಾರಣಗಳಲ್ಲಿ ಒಂದೆಂದರೆ, ಅದು ತನ್ನನ್ನು ತಾನು ಸಂಕುಚಿತಗೊಳಿಸಿಕೊಂಡಿತು; ಒಂದು ಮುತ್ತಿನಹುಳುವಿನಂತೆ ತಾನೇ ರಚಿಸಿಕೊಂಡ ಕೋಶದಲ್ಲಿ ಅಡಗಿಕೊಂಡಿತು; ಆಭರಣಗಳು ಮತ್ತು ಸಂಪತ್ತುಗಳಂತೆ ಇರುವ ತನ್ನ ಆಧ್ಯಾತ್ಮಿಕತೆಯನ್ನು ಜಗತ್ತಿನ ಇತರ ಜನಾಂಗಗಳಿಗೆ ಧಾರೆಯೆರೆಯಲು ನಿರಾಕರಿಸಿತು; ಜೀವಪೋಷಕವಾದ ಸತ್ಯಗಳನ್ನು ಅದಕ್ಕಾಗಿ ಕಾತರರಾಗಿರುವ ಆರ್ಯಕುಲದ ಹೊರಗಡೆಯ ರಾಷ್ಟ್ರಗಳಿಗೆ ನೀಡಲು ನಿರಾಕರಿಸಿತು. ನಮ್ಮ ಅಧಃಪತನಕ್ಕೆ ಇದೊಂದು ದೊಡ್ಡ ಕಾರಣ. ನಾವು ಹೊರದೇಶಗಳಿಗೆ ಹೋಗಲಿಲ್ಲ. ನಾವು ಇತರ ದೇಶಗಳೊಡನೆ ವಿಚಾರವಿನಿಮಯವನ್ನೂ ಮಾಡಿಕೊಳ್ಳಲಿಲ್ಲ."

ಸ್ವಾಮೀಜಿ ತಮ್ಮೊಬ್ಬ ಶಿಷ್ಯರಿಗೆ ಬರೆದ ಪತ್ರದಲ್ಲಿ ಹೀಗೆ ಹೇಳುತ್ತಾರೆ: "ಮಗೂ, ಯಾವ ವ್ಯಕ್ತಿಯೂ, ಯಾವ ದೇಶವೂ ಇತರರನ್ನು ದ್ವೇಷಿಸಿ, ಬದುಕಲು ಸಾಧ್ಯವಾಗದು. ಎಂದು ಭಾರತೀಯರು 'ಮ್ಲೇಚ್ಛ' (ಪರಕೀಯ) ಎಂಬ ಪದವನ್ನು ಕಂಡು ಹಿಡಿದರೋ ಹಾಗೂ ಇತರ ದೇಶದವರೊಡನೆ ಸಂಪರ್ಕವನ್ನು ನಿಲ್ಲಿಸಿದರೋ ಅಂದೇ ಭಾರತದ ಅದೃಷ್ಟವು ಮುಚ್ಚಿಹೋಯಿತು."

ಪ್ರಪಂಚದ ಇತರ ಭಾಗಗಳಿಂದ ಭಾರತದ ಏಕಾಂಗಿತನವು ಎರಡು ತೆರನಾಗಿತ್ತು: **೧. ರಾಜಕೀಯ** ಮತ್ತು **೨. ಸಾಂಸ್ಕೃತಿಕ.** ಬ್ರಿಟಿಷರ ಆಳ್ವಿಕೆಯು ರಾಜಕೀಯ ಏಕಾಂಗಿತನವನ್ನು ಕೊನೆ ಗೊಳಿಸಿತು. ಪಾಶ್ಚಾತ್ಯ ರಾಷ್ಟ್ರಗಳಿಗೆ ಭಾರತೀಯರ ಪಯಣ ಮತ್ತು ಅಲ್ಲಿನ ಜನರ ಒಳಿತಿಗಾಗಿ ಅವರು ಅಲ್ಲಿ ಮಾಡಿದ ಕಾರ್ಯ – ಇವು ಭಾರತದ ಸಾಂಸ್ಕೃತಿಕ ಏಕಾಂಗಿತನವನ್ನು ಅಂತ್ಯ ಗೊಳಿಸಿತು. ಸ್ವಾಮೀಜಿ ಪೌರಸ್ತ್ಯ ಮತ್ತು ಪಾಶ್ಚಾತ್ಯ ಜಗತ್ತುಗಳ ನಡುವೆ ಸೌಹಾರ್ದತೆಯ ಸೇತುವೆಯನ್ನು ನಿರ್ಮಿಸಿದರು. ಮುಂದಿನ ವರ್ಷಗಳಲ್ಲಿ ಭಾರತಕ್ಕೆ ಭೇಟಿಕೊಟ್ಟ ಮಿಕ್ಕೆಲ್ಲ ಭಾರತೀಯ ಆಧ್ಯಾತ್ಮಿಕ ಬೋಧಕರೆಲ್ಲರೂ ಇದರ ಪೂರ್ಣ ಸದುಪಯೋಗವನ್ನು ಪಡೆದುಕೊಂಡರು.

## ಸ್ವಾಮಿ ವಿವೇಕಾನಂದರ ಮುಂದುವರಿದ ಪ್ರಭಾವ

ಭಾರತವು ಸ್ವಾತಂತ್ರ್ಯವನ್ನು ಪಡೆಯುವುದಕ್ಕೆ ನಲವತ್ತು ವರ್ಷಗಳ ಮುಂಚೆಯೇ ಸ್ವಾಮಿ ವಿವೇಕಾನಂದರು ದೇಹತ್ಯಾಗ ಮಾಡಿದರು. ಆದರೆ ಅವರ ಸ್ಫೂರ್ತಿಯುತ ಚೇತನ ಮತ್ತು ಸಂದೇಶಗಳು ಸ್ವಾತಂತ್ರ್ಯಾನಂತರವೂ ಕೂಡ ಅಸಂಖ್ಯಾತ ಜನರನ್ನು ಪ್ರೇರೇಪಿಸುತ್ತಿದೆ. ತಮ್ಮ ದೇಹವನ್ನು ತ್ಯಜಿಸುವುದಕ್ಕೆ ಕೆಲವು ದಿನಗಳ ಮುಂಚೆ ಸ್ವಾಮೀಜಿ ಹೀಗೆ ಹೇಳಿದ್ದರು: "ನಾನು ಈ ದೇಹದಿಂದ ಹೊರಗೆ ಹೋಗುವುದೇ, ಅದನ್ನು ಒಂದು ಹರಿದ ಬಟ್ಟೆಯಂತೆ ಬಿಸುಡುವುದೇ ಒಳ್ಳೆಯದೆಂದು ತೋರುತ್ತದೆ... ಆದರೆ ನಾನು ಕೆಲಸ ಮಾಡುವುದನ್ನು ಎಂದಿಗೂ ನಿಲ್ಲಿಸುವುದಿಲ್ಲ. ಇಡೀ ಜಗತ್ತು ತಾನು ಭಗವಂತನೊಡನೆ ಒಂದೆಂದು ತಿಳಿಯುವವರೆಗೂ ನಾನು ಎಲ್ಲೆಲ್ಲಿಯೂ ಜನರಲ್ಲಿ ಸ್ಫೂರ್ತಿಯನ್ನು ಬಿತ್ತುತ್ತೇನೆ."

ಸ್ವಾಮೀಜಿಯವರು ಮಹಾಸಮಾಧಿಯಾದ ಕೇವಲ ಹತ್ತು ವರ್ಷದೊಳಗೆ, ಭಾರತದ ಹಲವು ಭಾಗಗಳು, ಅದರಲ್ಲೂ ಬಂಗಾಳ ಪ್ರದೇಶವು ರಾಜಕೀಯ ಕ್ರಾಂತಿಯ ಉತ್ಸಾಹದೊಂದಿಗೆ ಎಚ್ಚರಗೊಂಡವು. ಆ ಕ್ರಾಂತಿಕಾರಿಗಳು ಸ್ವಾಮಿ ವಿವೇಕಾನಂದರ ಬೋಧನೆಗಳನ್ನೇ ತಮ್ಮ ಪಾಲಿನ ವೇದವಾಕ್ಯಗಳೆಂದು ಪರಿಗಣಿಸಿ ದ್ದರು. ಇದೇ ಸಮಯದಲ್ಲಿ ಶ್ರೀಅರವಿಂದರು ಈ ಬಗ್ಗೆ ಹೀಗೆ ಬರೆದರು: "ಸ್ವಾಮಿ ವಿವೇಕಾನಂದರು ಅದ್ಭುತಶಕ್ತಿಯ ಮಹಾತ್ಮರು; ಮನುಜರಲ್ಲಿ ಸಿಂಹಸದೃಶರು. ಅವರ ಸೃಜನಾತ್ಮಕ ಸಾಮರ್ಥ್ಯ ಮತ್ತು ಸ್ಥೈರ್ಯಗಳ ಬಗ್ಗೆ ನಾವು ಹೊಂದಿರುವ ಅಭಿಪ್ರಾಯಗಳಿಗೆ ಪೂರಕವಾಗಿಯೇ ಅವರು ಬಿಟ್ಟುಹೋಗಿರುವ ಸುನಿರ್ಧಾರಿತ ಕಾರ್ಯಯೋಜನೆಗಳೂ ಇರುವುದು ನಿಜಕ್ಕೂ ಅಚ್ಚರಿಯ ಸಂಗತಿ. ಅವರ ಪ್ರಭಾವವು ದೈತ್ಯಪ್ರಮಾಣದಲ್ಲಿ ಇಂದಿಗೂ ಕಾರ್ಯವೆಸಗುತ್ತಿರುವುದನ್ನು ನಾವು ಕಣ್ಣಾರೆ ನೋಡುತ್ತಿದ್ದೇವೆ. ಆದರೆ, ಅದು ಹೇಗೆ ಉಂಟಾಗುತ್ತಿದೆ, ಎಲ್ಲಿ ಉಂಟಾಗುತ್ತಿದೆ ಎಂಬುದನ್ನು ಅರಿಯಲು ಅಸಮರ್ಥರಾಗಿದ್ದೇವೆ. ಅದೊಂದು ಇನ್ನೂ ಸ್ಪಷ್ಟವಾಗಿ ರೂಪುಗೊಳ್ಳದ ಸಂಗತಿಯಾಗಿದೆ. ಅದೊಂದು ಘನತೆವೆತ್ತ, ಅನುಭೂತಿಯಿಂದ ಒಡಮೂಡಿದ, ಅದ್ಭುತವಾದ, ಭಾರತದ ಆತ್ಮದ ಆಂತರಂಗಿಕ ಉತ್ಥಾನವಾಗಿದೆ. ಹಾಗೆಂದೇ ನಾವು ಹೇಳುತ್ತೇವೆ, 'ಅದೋ ನೋಡು, ಸ್ವಾಮಿ ವಿವೇಕಾನಂದರು ತಮ್ಮ ಜನನಿಯ (ಭಾರತ ಮಾತೆಯ) ಅಂತರಾತ್ಮದಲ್ಲಿ ಹಾಗೂ ಆಕೆಯ ಪುತ್ರರ ಅಂತರಂಗಗಳಲ್ಲಿ ಇನ್ನೂ ಜೀವಿಸಿದ್ದಾರೆ' " ಎಂದು.

ನೇತಾಜಿ ಸುಭಾಷ್‌ಚಂದ್ರ ಬೋಸರ ನಿರ್ಗಮನದ ನಂತರ, ಕ್ರಾಂತಿಕಾರಿ ಚಳವಳಿ ಕೊನೆಗೊಂಡಿತು. ಅದು ಒಟ್ಟಾರೆ, ಇಡೀ ಭಾರತೀಯ ಸಮುದಾಯದಲ್ಲಿ ಅಚ್ಚಳಿಯದ ಜಾಗೃತಿಯನ್ನು ಉಂಟುಮಾಡಿತು. ಹಾಗೆಯೇ ಬೃಹತ್ತಾದ ಮನೋಸಾಮಾಜಿಕ ಶಕ್ತಿಯ ಬಿಡುಗಡೆಗೂ ಕಾರಣವಾಯಿತು. ಮುಂದೆ ಮಹಾತ್ಮ ಗಾಂಧಿ ಆ ಅಗಾಧ ಶಕ್ತಿಯಲೆಯ ಉಬ್ಬರದ ಮೇಲೆ ಸವಾರಿ ಮಾಡಿಕೊಂಡು ಬಂದರು; ಅದನ್ನು ಸಮರ್ಥವಾಗಿ ನಿಯಂತ್ರಿ ಸಿದರು ಮತ್ತು ಆ ಶಕ್ತಿಯನ್ನು 'ಅಹಿಂಸೆ' ಮತ್ತು 'ಸತ್ಯಾಗ್ರಹ'ಗಳೆಂಬ ಎರಡು ಕಾಲುವೆಗಳ ಮೂಲಕ ಹರಿಸಿದರು. ⌘

ಸ್ವಾಮಿ ಮುಕ್ತಿದಾನಂದ

*(ಹಿಂದಿನ ಸಂಚಿಕೆಯಿಂದ)*

# ಭಗವಂತನ ಅಸ್ತಿತ್ವದ ಪ್ರಮಾಣಪುರುಷರಾಗಿ ಶ್ರೀರಾಮಕೃಷ್ಣರು

### ಆಧ್ಯಾತ್ಮಿಕ ಅನುಭವಗಳು

ಶ್ರೀರಾಮಕೃಷ್ಣರು ದಿವ್ಯಶಕ್ತಿಯ ನಿರಂತರ ಸಾನ್ನಿಧ್ಯದ ಜೀವಂತ ಅನುಭವವನ್ನು ಪಡೆದುಕೊಂಡದ್ದು ಸಾಕಾರ ಭಗವಂತನ ಜೊತೆಗೆ ಸಂಬಂಧವನ್ನು ಸ್ಥಾಪಿಸುವ ಮೂಲಕ. ಈ ನಿಟ್ಟಿನಲ್ಲಿ ಅವರಿಗೆ ಉಂಟಾದ ದರ್ಶನಗಳು ಹಲವಾರು. ಶಿವ, ರಾಮ, ಹನುಮಂತ, ಬೃಂದಾವನದ ಆಸುಪಾಸಿನಲ್ಲಿ ಶ್ರೀಕೃಷ್ಣ, ಧಾರ್ಮಿಕ ಉಪನ್ಯಾಸದ ಸಮಯದಲ್ಲಿ ಶ್ರೀಚೈತನ್ಯ ಮಹಾಪ್ರಭು, ಏಸುಕ್ರಿಸ್ತ, ಪ್ರವಾದಿ ಮಹಮ್ಮದ್ ಪೈಗಂಬರ್ ಮುಂತಾದವರು ಅಂತಹ ಕೆಲವು ನಿದರ್ಶನಗಳು. ಹಾಗೆಯೇ ಅವರು ಕಾಳೀಮಾತೆಯನ್ನು ದಿವ್ಯತೆಯ ಅತ್ಯಂತ ಶ್ರೇಷ್ಠ ಅಭಿವ್ಯಕ್ತಿ ಎಂದು ಆರಾಧಿಸುತ್ತಿದ್ದರು. ಆಕೆಯ ಸಾನ್ನಿಧ್ಯವನ್ನು ಎಲ್ಲ ಸಮಯದಲ್ಲಿಯೂ ಅನುಭವಿಸುತ್ತಿದ್ದರು.

ಶ್ರೀರಾಮಕೃಷ್ಣರು ಪಡೆದುಕೊಂಡ ದರ್ಶನಗಳ ವಿಶಾಲ ವ್ಯಾಪ್ತಿ ನಿಜಕ್ಕೂ ಅಸಾಧಾರಣವಾದುದು. ಕೆಲವು ವಿಚಾರವಾದಿಗಳು ಅವನ್ನು ಮಾನಸಿಕ ಭ್ರಾಂತಿಯೆಂದು ತಳ್ಳಿಹಾಕಬಹುದು. ಏಕೆಂದರೆ ಅವು ಸಾಧಾರಣವಾದ ಇಂದ್ರಿಯಾನುಭವಗಳಲ್ಲ. ಹೀಗಾಗಿ ಇಂದ್ರಿಯ ಸ್ತರದಲ್ಲಿ ಜೀವಿಸುತ್ತಿರುವ ಸಾಧಾರಣ ಜನರಿಗಾಗಿ ಇರುವ ಮನೋವಿಜ್ಞಾನದ ಮಾಪಕಗಳನ್ನು ಅವುಗಳಿಗೆ ಅನ್ವಯಿಸಲು ಸಾಧ್ಯವಿಲ್ಲ. ಆದರೆ, ಶ್ರೀರಾಮಕೃಷ್ಣರ ಜೀವನ ಮತ್ತು ಅನುಭವಗಳು ಮಾನವ ಸಾಧ್ಯತೆಗಳ ಹಂತಗಳಿಂದ ಎಷ್ಟೋ ಉನ್ನತಮಟ್ಟಕ್ಕೆ ನಮ್ಮನ್ನು ಕರೆದುಕೊಂಡು ಹೋಗುತ್ತವೆ ಎನ್ನುವುದನ್ನು ಮರೆಯಲಾಗದು. ಅವು ಆಧುನಿಕ ಮನೋವಿಶ್ಲೇಷಣೆಯ ವಿಧಿವಿಧಾನಗಳಿಗೆ ಎಳ್ಳಷ್ಟೂ ಒಳಪಡುವುದಿಲ್ಲ. ಏಕೆಂದರೆ ಅಂಥ ವಿಧಾನಗಳು ಮಾನವನ ಲೌಕಿಕ ಅನುಭವಗಳ ವಿಶ್ಲೇಷಣೆಗೆ ಮಾತ್ರವೇ ಸೀಮಿತವಾಗಿವೆ. ಈ ಇಂದ್ರಿಯಾತೀತ ಆಧ್ಯಾತ್ಮಿಕ ಅನುಭವಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ಮೊದಲು ನಾವು ನಮ್ಮ ಮನಸ್ಸನ್ನು ಪರಿಶುದ್ಧಗೊಳಿಸಿಕೊಳ್ಳಬೇಕು ಹಾಗೂ ನಮ್ಮನ್ನು ನಾವು ಶಿಸ್ತುಬದ್ಧಗೊಳಿಸಿಕೊಳ್ಳಬೇಕು. ಹಿಂದೂ ಮನಶ್ಶಾಸ್ತ್ರವಾದ ಯೋಗದರ್ಶನವು ನಮಗೆ ಮನಸ್ಸಿನ ವಿವಿಧ ಆಯಾಮಗಳ ಆಳವಾದ ಅರಿವನ್ನು ಮಾಡಿಕೊಡುತ್ತದೆ. ಅವೆಂದರೆ, ಸುಪ್ತ ಪ್ರಜ್ಞೆ, ಸಾಧಾರಣ ಪ್ರಜ್ಞೆ ಮತ್ತು ಇಂದ್ರಿಯಾತೀತ ಪ್ರಜ್ಞೆ. ಶ್ರೀರಾಮಕೃಷ್ಣರಾದರೋ ಇಂದ್ರಿಯಾತೀತ ಪ್ರಜ್ಞೆಯಿಂದ ಒಡಮೂಡಿದ ಹಲವಾರು ಅನುಭವಗಳನ್ನು ಪಡೆದುಕೊಂಡಿದ್ದರು ಮಾತ್ರವಲ್ಲ, ಬಹಳಷ್ಟು ಕಾಲ ಆ ಅಲೌಕಿಕ ಹಂತದಲ್ಲಿಯೇ ವಿಹರಿಸುತ್ತಿದ್ದರು.

ಶ್ರೀಅರವಿಂದರಂಥ ಮಹಾನ್ ಯೋಗಿಗೆ ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಅನುಭವಗಳ ಅದ್ಭುತ ಸರಣಿ ಅಪೂರ್ವವೆನಿಸಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಅವರು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಹೀಗೆ ಬರೆಯುತ್ತಾರೆ: "ಇತ್ತೀಚಿನ ಹಾಗೂ ವಿಶಿಷ್ಟವಾದ ನಿದರ್ಶನವಿದು. ಶ್ರೀರಾಮಕೃಷ್ಣರ ಪರಮಹಂಸರ ಜೀವನದಲ್ಲಿ ದಿವ್ಯತೆಯ ಸಾಕ್ಷಾತ್ಕಾರದ ಆಳಕ್ಕೆ ನೇರವಾಗಿ ಧುಮುಕುವ ಮಹತ್ತಮವಾದ ಆಧ್ಯಾತ್ಮಿಕ ಶಕ್ತಿಯನ್ನು ಮೊಟ್ಟಮೊದಲು ಕಾಣುತ್ತೇವೆ. ಅದು ಹೇಗಿತ್ತೆಂದರೆ, ಬಲಾತ್ಕಾರವಾಗಿ ಸ್ವರ್ಗರಾಜ್ಯಕ್ಕೇ ಮುತ್ತಿಗೆ ಇತ್ತಹಾಗೆ ಕಾಣುತ್ತಿತ್ತು. ಅನಂತರ ಒಂದಾದ ಮೇಲೊಂದರಂತೆ ಅವರು ಹಲವಾರು ಯೋಗವಿಧಾನಗಳನ್ನು ಕೈಗೆತ್ತಿಕೊಳ್ಳುತ್ತ ಬಂದರು. ಅವೆಲ್ಲದರ ಸಾರಸರ್ವಸ್ವವನ್ನು ಮಹಾನ್ ವೇಗದಿಂದ ಆವಿಷ್ಕರಿಸುತ್ತ ಸಾಗಿದರು. ಪ್ರತಿಯೊಂದು ಸಾಧನೆಯಾದ ಮೇಲೆಯೂ ತಮ್ಮ ಇಡೀ ಜೀವನದ ಹೃದಯಭಾಗಕ್ಕೆ ಮತ್ತೆ ಹಿಂತಿರುಗುತ್ತಿದ್ದರು. ಆ ಹೃದಯಭಾಗವು ಪ್ರೇಮದ ಬಲದಿಂದ ಸಾಕ್ಷಾತ್ಕಾರವನ್ನು ಮತ್ತು ಭಗವದ್ಭಾವವನ್ನು ಪಡೆದುಕೊಳ್ಳುವುದೇ ಆಗಿತ್ತು; ಅವರಲ್ಲಿ ಅಂತರ್ಗತವಾಗಿದ್ದ ಆಧ್ಯಾತ್ಮಿಕತೆಯನ್ನು ಬಗೆಬಗೆಯ ಅನುಭವಗಳಿಗೆ ವಿಸ್ತರಿಸಿಕೊಳ್ಳುವುದೇ ಆಗಿತ್ತು; ಅವರಲ್ಲಿ ಮಡುಗಟ್ಟಿದ್ದ ಅನುಭೂತಿಜನಿತ ಜ್ಞಾನದ ಸ್ವಯಂಪ್ರೇರಿತ ಲೀಲೆಯೇ ಆಗಿತ್ತು. ಶ್ರೀರಾಮಕೃಷ್ಣರ ಜೀವನವೆಂಬ ಇಂತಹುದೊಂದು ಅದ್ಭುತ ನಿದರ್ಶನವನ್ನು ಸಾಮಾನ್ಯೀಕರಿಸಲು ಸಾಧ್ಯವಿಲ್ಲವಷ್ಟೇ. ಈ ಜೀವಿತವು ವಿಶೇಷವಾದೊಂದು ಲೌಕಿಕ ಉದ್ದೇಶವನ್ನೂ ಹೊಂದಿತ್ತು. ಅದೆಂದರೆ ಮಹತ್ತರವೂ ನಿರ್ದಿಷ್ಟವೂ ಆದ ಅನುಭವಗಳ ಮೂಲಕ ಮಾನವತೆಗೆ ಇಂದು ಅತ್ಯವಶ್ಯವಾದ ಸತ್ಯವೊಂದನ್ನು ತಮ್ಮ

ಮಹಾನ್ ಚೇತನದಲ್ಲಿ ತೋರ್ಪಡಿಸುವುದು. ಈ ಸತ್ಯದ ಅನ್ವೇಷಣೆಯಲ್ಲಿ ಕಠಿಣ ಪರಿಶ್ರಮದೊಂದಿಗೆ ತೊಡಗಿಸಿಕೊಂಡಿರುವ ಸಂಪ್ರದಾಯಗಳು ಮತ್ತು ತಾತ್ತ್ವಿಕ ಶಾಖೆಗಳು ಪರಸ್ಪರ ಕಲಹವಾಡುತ್ತ ನಮ್ಮೀ ಜಗತ್ತನ್ನು ವಿಭಜಿಸಿಬಿಟ್ಟಿವೆ. ಆದರೆ ಈ ಎಲ್ಲ ಮತಗಳು ಒಂದೇ ಅಖಂಡ ಸತ್ಯದ ವಿವಿಧ ರೂಪಗಳು ಮತ್ತು ಪ್ರವಿಭಾಗಗಳು ಹಾಗೂ ಎಲ್ಲ ಸಾಧನೆಗಳೂ ಏಕಮೇವ ಪರಮಾನುಭವವನ್ನೇ ಉದ್ದೇಶವಾಗಿಟ್ಟುಕೊಂಡು ಶ್ರಮಿಸುತ್ತಿವೆ ಎಂದು ಶ್ರೀರಾಮಕೃಷ್ಣರ ಅನುಭವಗಳು ತೋರಿಸಿಕೊಡುತ್ತವೆ... ಹೀಗೆ ಶ್ರೀರಾಮಕೃಷ್ಣ ಪರಮಹಂಸರು ಅಖಂಡತೆಯ ಶ್ರೇಷ್ಠ ಅಭಿವ್ಯಕ್ತಿಯಾಗಿ ಕಂಗೊಳಿಸುತ್ತಾರೆ. ಅವರದು ಮಹತ್ತರವಾದ ಅತೀಂದ್ರಿಯ ಜೀವನ. ಅದೊಂದೇ, ಜೀವಿಗಳಾದ ನಮ್ಮಂತೆ ಇರುವ ಎಲ್ಲ ತರದ ಅಲೆಗಳನ್ನೂ ತನ್ನ ತೆಕ್ಕೆಯಲ್ಲಿ ತಂದುಕೊಂಡಿರುವ ಬೃಹದ್ ಸಮುದ್ರ ತರಂಗದಂತೆ ಅನಂತತೆಯ ಪರಿಪೂರ್ಣ ಸಾಕ್ಷಿಯಾಗಬಲ್ಲುದು. ಶ್ರೀರಾಮಕೃಷ್ಣರು ನಮ್ಮೆಲ್ಲರ ಹಿನ್ನೆಲೆಯಲ್ಲಿ ಮತ್ತು ಮುಂದುಗಡೆಯಲ್ಲಿ – ಎರಡೂ ಕಡೆ ಇರುವ ದಿವ್ಯಶಕ್ತಿಯ ಸಾಕ್ಷೀಭೂತರಾಗಿದ್ದಾರೆ."

ಶ್ರೀರಾಮಕೃಷ್ಣರು ಸದಾಕಾಲ ದಿವ್ಯತೆಯ ಸಂಪರ್ಕವನ್ನು ಹೊಂದಿರುತ್ತಿದ್ದರು. ಈ ಬಗೆಯ ನಿರಂತರ ಭಗವತ್‌ಪ್ರಜ್ಞೆಯು ಅವರ ವ್ಯಕ್ತಿತ್ವದ ಅತ್ಯಂತ ರೋಮಾಂಚಕಾರಿ, ಅಸಾಧಾರಣ ಮತ್ತು ವಿರಳ ಲಕ್ಷಣವಾಗಿತ್ತು. ಶ್ರೀರಾಮಕೃಷ್ಣರೇ ವಿವರಿಸುವಂತೆ, ಜಗನ್ಮಾತೆಯು ಅವರನ್ನು 'ಭಾವಮುಖದಲ್ಲಿರು' ಎಂದು ಆದೇಶಿಸಿದ್ದಳು. ಭಾವಮುಖವೆಂದರೆ ನಿರಪೇಕ್ಷ ಮತ್ತು ಸಾಪೇಕ್ಷ ಪ್ರಜ್ಞೆಗಳು ಮಿಲನಗೊಳ್ಳುವ ಹೊಸ್ತಿಲಿನಲ್ಲಿ ಮನಸ್ಸನ್ನು ನಿಲ್ಲಿಸಿರುವುದು.

ಹಲವಾರು ಆಧ್ಯಾತ್ಮಿಕ ಅನುಭವಗಳನ್ನು ಪಡೆದುಕೊಂಡ ನಂತರವೂ ಶ್ರೀರಾಮಕೃಷ್ಣರ ಮನಸ್ಸು ವಿಶ್ವಕೇಂದ್ರದಲ್ಲಿ ನೆಲೆಸಿರುವ ದಿವ್ಯಶಕ್ತಿಯ ಸಂಪರ್ಕವನ್ನು ಸದಾ ಹೊಂದಿತ್ತು. ಈ ಶಕ್ತಿಯನ್ನು ಅವರು 'ಕಾಳೀಮಾತೆ' ಎಂದು ಕರೆದರು. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಕೂಡ, ಹಲವಾರು ವರ್ಷಗಳ ಕಾಲ ಕಂಡುಬಂದ ದಿವ್ಯತೆಯೊಂದಿಗಿನ ಈ ಬಗೆಯ ನಿರಂತರ ಬಾಂಧವ್ಯವು ವಿರಳಾತಿವಿರಳ. ಕಾಲಕಾಲಕ್ಕೆ ಶ್ರೀರಾಮಕೃಷ್ಣರು ಪಡೆದುಕೊಳ್ಳುತ್ತಿದ್ದ ದರ್ಶನಗಳು ಮತ್ತು ಅತೀಂದ್ರಿಯ ಸ್ಥಿತಿಯಾದ ಸಮಾಧಿಯ ನೆಲೆಗೆ ಏರುತ್ತಿದ್ದುದು – ಇವೆಲ್ಲವೂ ದುರ್ಲಭವಾದ ಈ ದಿವ್ಯ ಬಾಂಧವ್ಯದ ಫಲಶ್ರುತಿಗಳು.

ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಅನುಭವಗಳ ನಿಜವಾದ ಮೌಲ್ಯವನ್ನು ನಾವು ಅಳೆಯಬೇಕಾದುದು, ಅವು ಅವರ ವ್ಯಕ್ತಿತ್ವದ ಮೇಲೆ ಬೀರಿದ ಪ್ರಭಾವ ಮತ್ತು ಹಾಗೆಯೇ ಅವರು ಇತರರ ಜೀವನದ ಮೇಲೆ ಉಂಟುಮಾಡಿದ ಪರಿಣಾಮಗಳಿಂದ. ಶ್ರೀರಾಮಕೃಷ್ಣರು ಪಡೆದುಕೊಂಡ ಭಗವದನುಭವಗಳು ಅವರನ್ನು ಒಬ್ಬ ದಿವ್ಯ ಜ್ಯೋತಿಪುರುಷರನ್ನಾಗಿ ಪರಿವರ್ತಿಸಿದ್ದವು. ಇದು ಅವರನ್ನು ಸಂಪರ್ಕಿಸಿದವರ ಮೇಲೂ ಸಕಾರಾತ್ಮಕ ಪ್ರಭಾವವನ್ನು ಉಂಟುಮಾಡುತ್ತಿತ್ತು. ಹಾಗೆಯೇ, ಜೀವನದ ಅತಿ ಕಷ್ಟಕರ ಸನ್ನಿವೇಶಗಳಾದ ಖಾಯಿಲೆ ಮತ್ತು ನೋವಿನ ಸಂದರ್ಭಗಳಲ್ಲಿಯೂ ಅವರ ಸಮಾಧಿಯ ದಿವ್ಯ ಅನುಭವಕ್ಕೆ ಯಾವ ಕುಂದೂ ಉಂಟಾಗಲಿಲ್ಲ. ಇದು ಒಂದು ದೇಗುಲದ ಒಬ್ಬ ಸಾಧಾರಣ ಪೂಜಾರಿಯನ್ನು ಅಮೂರ್ತ ದಿವ್ಯತೆಯ ಅಸ್ತಿತ್ವದ ವಿಷಯದಲ್ಲಿ ಅಧಿಕೃತ ಪ್ರಮಾಣವನ್ನು ನೀಡಬಲ್ಲ ಯುಗಪುರುಷರನ್ನಾಗಿ ಮಾರ್ಪಡಿಸಿತು. ಹಾಗೆಯೇ ಸಂದೇಹವಾದಿಗಳಾಗಿದ್ದ ಅಂದಿನ ಕಾಲದ ಬಹುದೊಡ್ಡ ಬುದ್ಧಿಜೀವಿಗಳ ವಲಯದ ಮೇಲೆ ಪ್ರಭಾವ ಬೀರಬಲ್ಲ ಮತ್ತು ಅವರನ್ನು ಪರಿವರ್ತಿಸಬಲ್ಲ ಆಧ್ಯಾತ್ಮಿಕ ನಿಶ್ಚಯಶಕ್ತಿಯನ್ನು ಕೂಡ ಅವರಿಗೆ ಪ್ರದಾನ ಮಾಡಿತು. ಅವರಲ್ಲಿ ಕೆಲವರೆಂದರೆ, ನರೇಂದ್ರನಾಥ (ಮುಂದೆ ಸ್ವಾಮಿ ವಿವೇಕಾನಂದ), ಗಿರೀಶಚಂದ್ರ ಘೋಷ್, ಈಶ್ವರಚಂದ್ರ ವಿದ್ಯಾಸಾಗರ ಮುಂತಾದವರು.

ಶ್ರೀರಾಮಕೃಷ್ಣರು ಹೇಗೆ ತಾನೇ ಭಗವಂತನ ಅಸ್ತಿತ್ವದ ಪ್ರಮಾಣಪುರುಷರಾಗಬಲ್ಲರು ಎನ್ನುವುದನ್ನು ಗಮನಿಸಿ ನೋಡುವುದು ನಿಜಕ್ಕೂ ಆಸಕ್ತಿಯ ಸಂಗತಿ. ಭಗವಂತನ ಅಸ್ತಿತ್ವವನ್ನು ಅನುಮಾನಿಸಿ ನೋಡಬಲ್ಲ ಆಕರಗಳಾವುವು? ಮಾನವ ಮನಸ್ಸಿನ ಸಂದೇಹ ಸ್ವಭಾವವನ್ನು ತಣಿಸುವುದಾದರೂ ಹೇಗೆ? ಸಿರಿಗೆರೆಯ ತರಳಬಾಳು ಮಠದ ಶಿವೈಕ್ಯ ಶಿವಕುಮಾರ ಶಿವಾಚಾರ್ಯ ಸ್ವಾಮೀಜಿಯವರು ೧೯೩೭ರ ಸುಮಾರಿಗೆ ತಮ್ಮ ಸ್ವಂತ ಪ್ರಯೋಜನಕ್ಕಾಗಿ ಬರೆದುಕೊಂಡಿದ್ದ ದಿನಚರಿಯನ್ನು 'ಆತ್ಮನಿವೇದನೆ' ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಲಾಗಿದೆ. ಅದರಲ್ಲಿ ಪೂಜ್ಯ ಸ್ವಾಮೀಜಿಯವರು ಭಗವಂತನ ಅಸ್ತಿತ್ವದ ಬಗ್ಗೆ ಮೂರು ಸಾಕ್ಷ್ಯಗಳನ್ನು ನೀಡುತ್ತಾರೆ: ೧. ಪರಮಾತ್ಮನ ಪರಮಾದ್ಭುತ ಸೃಷ್ಟಿಯಾದ ಈ ಜಗತ್ತು ೨. ಶ್ರೀರಾಮಕೃಷ್ಣ ಪರಮಹಂಸರು ಮತ್ತು ೩. ಭಗವಂತನ ಅಸ್ತಿತ್ವದ ಅಧಿಕೃತ ಶಾಸ್ತ್ರೀಯ ದಾಖಲೆಗಳಾದ ವೇದಗಳು.

ಶ್ರೀರಾಮಕೃಷ್ಣರನ್ನು ಭಗವಂತನ ಅಸ್ತಿತ್ವದ ಪುರಾವೆಗಳಲ್ಲಿ ಒಂದನ್ನಾಗಿ ಪೂಜ್ಯರು ಹೆಸರಿಸಿರುವುದು ನಿಜಕ್ಕೂ ಅಪೂರ್ವವಾದುದು. ಶ್ರೀರಾಮಕೃಷ್ಣರ ಜೀವನ ಮತ್ತು ಬೋಧನೆಗಳು ಹೇಗೆ ಜಗತ್ತಿನಾದ್ಯಂತ ಜನರ ಮನಸ್ಸುಗಳ ಒಳಹೊಕ್ಕಿವೆ ಮತ್ತು ಅವರೆಲ್ಲರಿಗೆ 'ಭಗವಂತನು ಸಾಕ್ಷಾತ್ಕರಿಸಿಕೊಳ್ಳಬಲ್ಲ ನಿತ್ಯ ತತ್ತ್ವವೇ ಹೊರತು, ಬರೀ ಕಲ್ಪನೆಯ ಜಾಲವಲ್ಲ' ಎನ್ನುವುದನ್ನು ದೃಢಪಡಿಸಿವೆ ಎನ್ನುವುದಕ್ಕೆ ಇದೊಂದು ಉತ್ತಮ ನಿದರ್ಶನ.

ಶ್ರೀರಾಮಕೃಷ್ಣರು ಯುವಶಿಷ್ಯರ ಸಮುದಾಯವೊಂದನ್ನು ಕಟ್ಟಿ ಬೆಳೆಸಿದರು. ಅವರಿಗೆಲ್ಲ ತಮ್ಮ ಆಧ್ಯಾತ್ಮಿಕ ಸಂಪತ್ತನ್ನು ಧಾರೆಯೆರೆದರು. ಈ ಸಂನ್ಯಾಸಿ ಶಿಷ್ಯರ ಜೀವನವನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಅವರ ಗುರುದೇವರ ದಿವ್ಯತೆಯ ಪರಿಚಯ ನಮಗಾಗುತ್ತದೆ. ಅಂಥ ಪ್ರತ್ಯಕ್ಷ ಶಿಷ್ಯರಲ್ಲಿ ಕೆಲವರು ಶ್ರೀರಾಮಕೃಷ್ಣರ ಸಾನ್ನಿಧ್ಯದ ದಿವ್ಯಾನುಭವವನ್ನು – ಅವರು ಭೌತಿಕ ಶರೀರವನ್ನು ತ್ಯಜಿಸಿದ ನಂತರವೂ – ಪಡೆದುಕೊಳ್ಳುತ್ತಿದ್ದರು. ಶ್ರೀರಾಮಕೃಷ್ಣರು ಅಸೀಮ ದಿವ್ಯಶಕ್ತಿ ಮತ್ತು ಅನುಕಂಪಗಳ ಮೂರ್ತಿರೂಪರಾಗಿದ್ದಾರೆ ಮತ್ತು ಅವರು ಭಕ್ತರ ನಿಸ್ಪೃಹ ಪ್ರಾರ್ಥನೆಗೆ ಓಗೊಡುತ್ತಾರೆ ಎನ್ನುವುದಕ್ಕೆ ಇದೇ ಸಾಕ್ಷಿ.

ಸ್ವಾಮಿ ತುರೀಯಾನಂದರು ಶ್ರೀರಾಮಕೃಷ್ಣರ ಪ್ರತ್ಯಕ್ಷ ಶಿಷ್ಯರಲ್ಲಿ ಒಬ್ಬರು. ಅವರು ಪ್ರಖರ ವೇದಾಂತಿಗಳು ಮತ್ತು ಜ್ಞಾನಮಾರ್ಗವನ್ನು ಅವಲಂಬಿಸಿದವರು. ಅವರ ಜೀವನದಲ್ಲಿ ಒಂದು ಆಸಕ್ತಿಕರ ಘಟನೆ ಸಂಭವಿಸಿತು. ಇದು ಶ್ರೀರಾಮಕೃಷ್ಣರ ದಿವ್ಯಶಕ್ತಿ ಮತ್ತು ದಿವ್ಯಸಾನ್ನಿಧ್ಯದ ಬಗ್ಗೆ ಒಳನೋಟವನ್ನು

ನೀಡುತ್ತದೆ. ಇದು ನಡೆದದ್ದು ೧೯೧೬ ರಲ್ಲಿ, ಶ್ರೀರಾಮಕೃಷ್ಣರ ದೇಹತ್ಯಾಗವಾದ ಮೂವತ್ತು ವರ್ಷಗಳ ನಂತರ. ಒಂದು ದಿನ ಸ್ವಾಮಿ ತುರೀಯಾನಂದರು ಪುರಿಯ ಜಗನ್ನಾಥ ದೇಗುಲಕ್ಕೆ ಹೋದರು. ಅವರು ಪ್ರವೇಶದ್ವಾರದ ಮೆಟ್ಟಿಲುಗಳನ್ನು ಏರು ತ್ತಿದ್ದಂತೆ, ಪುಷ್ಪಮಾಲಾಧಾರಿಯಾದ ಶ್ರೀರಾಮಕೃಷ್ಣರು ಮೇಲಿ ನಿಂದ ಮೆಟ್ಟಿಲುಗಳ ಮೂಲಕ ಇಳಿದುಬರುತ್ತಿರುವುದನ್ನು ಕಂಡರು. ಒಡನೆಯೇ ತುರೀಯಾನಂದರು ಅವರತ್ತ ಧಾವಿಸಿದರು. ಆಶ್ಚರ್ಯವೆಂದರೆ, ಅವರು ಶ್ರೀರಾಮಕೃಷ್ಣರ ಪಾದಪದ್ಮಗಳಿಗೆ ನಮಸ್ಕರಿಸಲು ತಲೆಬಾಗುತ್ತಿದ್ದಂತೆಯೇ ಗುರುದೇವರು ಅದೃಶ್ಯ ರಾದರು. 'ಅವರು ಭೌತಿಕ ದೇಹದಲ್ಲಿ ಇಲ್ಲ' ಎಂದು ಸ್ವಾಮಿ ತುರೀಯಾನಂದರ ಮನಸ್ಸಿಗೆ ಬಂದದ್ದು ಆಗಲೇ. ಆಕ್ಷಣದಲ್ಲಿ, ಶ್ರೀರಾಮಕೃಷ್ಣರು ಜಗನ್ನಾಥ ಸ್ವಾಮಿಯ ಅವತಾರವೇ ಎಂಬ ನಿಷ್ಕರ್ಷೆಗೆ ಅವರು ಬಂದರು; ಆ ಸ್ವಾಮಿಯೇ ತಮಗೆ ಈ ದರ್ಶನ ನೀಡಿದ್ದಾನೆಂದು ನಿಶ್ಚಯಿಸಿದರು.

## ಉಪಸಂಹಾರ

ವಿಜ್ಞಾನ ಮತ್ತು ತಾಂತ್ರಿಕತೆಯು ಅಪಾರ ಬೆಳವಣಿಗೆ ಹೊಂದಿರುವ ಈ ಆಧುನಿಕ ಕಾಲದಲ್ಲಿ, ಎಲ್ಲ ಪ್ರಚಲಿತ ಧರ್ಮ ಗಳನ್ನೂ ಮತ್ತು ಸಂಸ್ಥೆಗಳನ್ನೂ ಸಂದೇಹದಿಂದ ನೋಡುವ ಪ್ರವೃತ್ತಿ ಹೆಚ್ಚಾಗುತ್ತಿದೆ. ಹೀಗಾಗಿ ಆಧುನಿಕ ಮನುಷ್ಯನಲ್ಲಿ ದೇವರ ಅಸ್ತಿತ್ವದ ಬಗ್ಗೆ ಶ್ರದ್ಧೆಯನ್ನು ಹೊಂದುವ ಸಾಮರ್ಥ್ಯ ಕುಂಠಿತವಾಗುತ್ತಿದೆ ಮತ್ತು ಬಾಳು ಅರ್ಥಹೀನವೆಂಬ ಭಾವನೆಯು ಬಾಧಿಸುತ್ತಿದೆ. ಆದರೆ, ಶ್ರೀರಾಮಕೃಷ್ಣರ ಅನುಭವಗಳು ಆಧುನಿಕ ಮಾನವನ ಜೀವನಕ್ಕೆ ಹೊಸ ಅರ್ಥವನ್ನು ಮತ್ತು ಹೊಸ ದೃಷ್ಟಿಕೋನವನ್ನು ನೀಡಬಲ್ಲವು. ಶ್ರೀರಾಮಕೃಷ್ಣರ ಜೀವನವು ಎಲ್ಲ ಕಾಲದಲ್ಲಿಯೂ ಕಂಡುಬರುವ ಸಂದೇಹವಾದಕ್ಕೆ ಸವಾಲನ್ನು ಒಡ್ಡುತ್ತದೆ. ಹಾಗೆಯೇ ಭಗವದರ್ಪಿತ ಜೀವನದಲ್ಲಿ ಮಾತ್ರವೇ ಉನ್ನತ ಸಾರ್ಥಕತೆ ಸಿದ್ಧಿಸು ವುದು ಎಂಬ ವಾಸ್ತವಾಂಶಕ್ಕೆ ಸಾಕ್ಷಿಯಾಗಿದೆ.

ಶ್ರೀರಾಮಕೃಷ್ಣರ ಜೀವನದಿಂದ ನಾವು ಕಲಿಯಬಹುದಾದ ಜೀವನಪಾಠಗಳು ಹೀಗಿವೆ: **೧. ಭಗವಂತನಿದ್ದಾನೆ ಮತ್ತು 'ಈ ಭೂಮಿಯಲ್ಲಿ ಆತನಿಗಿಂತ ಹೆಚ್ಚಿನದು ಯಾವುದೂ ಇಲ್ಲ' ಎಂಬ ಉತ್ಕಟ ಕಾತರಭಾವದಿಂದ ಕೂಡಿದ ಹೃದಯವನ್ನು ಮಾನವನು ಹೊಂದಿದಾಗ ಮಾತ್ರ ಅವನನ್ನು ನೇರವಾಗಿ ಸಾಕ್ಷಾತ್ಕರಿಸಿಕೊಳ್ಳ ಬಹುದು. ೨. ಭಗವಂತನ ದರ್ಶನವೇ ಧರ್ಮದ ಸಾರಸತ್ವ. ೩. ಜಗತ್ತಿನ ಎಲ್ಲ ಧರ್ಮಗಳೂ ಒಂದೇ ಗುರಿಯೆಡೆಗೆ ಮಾನವನನ್ನು ಕರೆದುಕೊಂಡು ಹೋಗುವ ವಿವಿಧ ಮಾರ್ಗಗಳು**.

ಆಧುನಿಕ ಜಗತ್ತು ಅಂಧಕಾರದಲ್ಲಿ ಮುಳುಗಿದೆ; ಎಲ್ಲೆಲ್ಲೂ ಮಂಕು ಕವಿದಿದೆ. ಇಂಥ ಪರಿಸ್ಥಿತಿಯಲ್ಲಿ **ಭಗವತ್ಸಮರ್ಪಿತ ಜೀವನ** ಮತ್ತು **ಭಗವಂತನಿಗಾಗಿ ಕಾತುರತೆ** – ಇವೆರಡೂ ಅಬದ್ಧ ಮತ್ತು ಅನುಷ್ಠಾನಯೋಗ್ಯವಲ್ಲವೆಂಬಂತೆ ತೋರಿಬರುತ್ತಿದೆ. ವ್ಯಕ್ತಿಗಳು ಮತ್ತು ರಾಷ್ಟ್ರಗಳು ಅಧಿಕಾರ ಮತ್ತು ಸ್ವಪ್ರತಿಷ್ಠೆಗಾಗಿ ನಾಗಾಲೋಟದ ಸ್ಪರ್ಧೆಯಲ್ಲಿ ತೊಡಗಿದ್ದಾರೆ. ಇಂಥ ದಾರುಣ ಸಂದರ್ಭದಲ್ಲಿ ಪ್ರಾಪಂಚಿಕ ಅಪೇಕ್ಷೆ ಮತ್ತು ಬಯಕೆಗಳ ಸೋಂಕೂ ಇಲ್ಲದೆ, ಭಗವಂತನಿಗೆ ಮುಡಿಪಾದ ಶ್ರೀರಾಮಕೃಷ್ಣರ ಮಹದದ್ಭುತ ಜೀವನವು ತನ್ನ ಅಸದಳ ಪ್ರಕಾಶ ಮತ್ತು ಪ್ರಭೆಗಳಿಂದ ನಮ್ಮೆಲ್ಲರ ದಾರಿದೀಪವಾಗಿ ಬೆಳಗುತ್ತಿದೆ.

ಮಹಾತ್ಮ ಗಾಂಧಿಯವರು ಶ್ರೀರಾಮಕೃಷ್ಣರ ಭಗವತ್‌ಕೇಂದ್ರಿತ ಜೀವನದ ಪರಮಾಕರ್ಷಣೆಯನ್ನು ಈ ಸುಂದರವಾದ ವಾಕ್ಯ ಪುಂಜ ಗಳಲ್ಲಿ ಹಿಡಿದಿಟ್ಟಿದ್ದಾರೆ: "ಶ್ರೀರಾಮಕೃಷ್ಣರು ದಿವ್ಯತೆಯ ಜೀವಂತ ಪ್ರತಿಮೂರ್ತಿಯಾಗಿದ್ದಾರೆ. ಅವರ ಮಾತುಗಳು ವಿದ್ವಾಂಸರದ್ದಲ್ಲ; ಅದಕ್ಕೆ ಬದಲಾಗಿ ಜೀವನಗ್ರಂಥದ ಪುಟಗಳಿಂದ ಮೂಡಿಬಂದವು. ಅವೆಲ್ಲವೂ ಅವರ ಸ್ವಂತ ಅನುಭವಗಳ ಫಲಶ್ರುತಿಗಳು. ಹೀಗಾಗಿ ಅವು ಓದುಗನ ಮನಸ್ಸಿನ ಮೇಲೆ ಅಳಿಸಲಾಗದ ಮುದ್ರೆ ಯನ್ನು ಬೀರುತ್ತವೆ. ಇಂದಿನ ಸಂದೇಹವಾದದ ಯುಗದಲ್ಲಿ ಶ್ರೀರಾಮಕೃಷ್ಣರು ಜ್ಯೋತಿಃಪುಂಜವಾದ ಮತ್ತು ಜೀವಂತವಾದ ಧರ್ಮವೊಂದರ ಪ್ರಖರ ನಿದರ್ಶನವಾಗಿ ಕಂಗೊಳಿಸುತ್ತಾರೆ. ಇಂಥ ಧರ್ಮವು ಸಾವಿರಾರು ಪುರುಷರಿಗೆ ಮತ್ತು ಮಹಿಳೆಯರಿಗೆ ಸಾಂತ್ವನವನ್ನು ನೀಡುವುದು. ಇದಿಲ್ಲದಿದ್ದರೆ, ಅವರೆಲ್ಲರೂ ಆಧ್ಯಾತ್ಮಿಕ ಜ್ಯೋತಿಯಿಂದ ವಂಚಿತರಾಗುತ್ತಿದ್ದರು. ಇದಲ್ಲದೆ, ಶ್ರೀರಾಮಕೃಷ್ಣರ ಜೀವನವು ಅಹಿಂಸೆಯ ವಿಷಯದಲ್ಲಿ ಪ್ರತ್ಯಕ್ಷ ಪಾಠವಾಗಿದೆ. ಅವರ ಪ್ರೇಮಕ್ಕೆ – ಭೌಗೋಳಿಕವಾಗಲಿ ಅಥವಾ ಇನ್ನಿತರ ಬಗೆಯದಾಗಲಿ – ಯಾವ ಎಲ್ಲೆಯೂ ಇರಲಿಲ್ಲ. ಅವರ ದಿವ್ಯಪ್ರೀತಿಯು ಎಲ್ಲರಿಗೂ ಸ್ಫೂರ್ತಿದಾಯಕವಾಗಲಿ!" ⌘


***Statement about ownership and other particulars about Viveka Prabha (according to Form IV Rule 8, circulated by Registrar of Newspapers for India)***

| | | |
|---|---|---|
| 1. Place of Publication | : | **Mysore 570 020** |
| 2. Periodicity of Publication | : | **Monthly** |
| 3. Printer's Name | : | **Swami Muktidananda** |
| Nationality | : | **Indian** |
| Address | : | **President, Sri Ramakrishna Ashrama, Yadavagiri, Mysore 570 020** |
| 4. Publisher's Name | : | **Swami Muktidananda** |
| Nationality | : | **Indian** |
| Address | : | **President, Sri Ramakrishna Ashrama, Yadavagiri, Mysore 570 020** |
| 5. Editor's Name | : | **Swami Vireshananda** |
| Nationality | : | **Indian** |
| Address | : | **Sri Ramakrishna Ashrama Yadavagiri Mysore 570 020** |
| 6. Name & Addresses of the individuals who own the newspaper and partners or share-holders holding more than 1% of the capital | : | **President, Sri Ramakrishna Ashrama, Yadavagiri Mysore 570 020** |

**I, Swami Muktidananda, hereby declare that the particulars given above are true to the best of my knowledge and belief.**

*Sd.*
***Swami Muktidananda***
01.04.2014 Signature of the Publisher

# 'ಮಂತ್ರಾಲಯ'ದಿಂದ 'ಓಂಕಾರೇಶ್ವರ'ದವರೆಗೆ

ತೀರ್ಥಯಾತ್ರೆ ಆಧ್ಯಾತ್ಮಿಕ ಸಾಧಕರ ಜೀವನದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಇಂಥ ಒಂದು ತೀರ್ಥಯಾತ್ರೆಯನ್ನು ಕೈಗೊಂಡು, ತಮ್ಮ ನೆನಪುಗಳನ್ನು ದಾಖಲಿಸಿರುವ ಸ್ವಾಮೀಜಿಯವರು ಮೈಸೂರಿನ ಶ್ರೀರಾಮಕೃಷ್ಣ ಆಶ್ರಮದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಸ್ವಾಮಿ ತೀರ್ಥಕರಾನಂದ

ತೀರ್ಥಯಾತ್ರೆಯು ಆಧ್ಯಾತ್ಮಿಕ ಜೀವನದ ಒಂದು ಪ್ರಮುಖ ಅಂಗ. ಭಗವಂತನ ವಿಶೇಷ ಸಾನ್ನಿಧ್ಯದ ಅನುಭವ ತೀರ್ಥಕ್ಷೇತ್ರಗಳಲ್ಲಿ ಉಂಟಾಗುವುದು. ಅದರಲ್ಲೂ ಸಂನ್ಯಾಸಿಗಳಾದವರಿಗೆ ತೀರ್ಥಯಾತ್ರೆಯು ಒಂದು ವಿಶೇಷವಾದ ಸಂದರ್ಭ; ತಮ್ಮ ಆಧ್ಯಾತ್ಮಿಕ ಸಾಧನೆಯನ್ನು ಬಲಪಡಿಸಿಕೊಳ್ಳುವ ಅವಕಾಶ. ಅಂಥ ಒಂದು ತೀರ್ಥಯಾತ್ರೆಯನ್ನು ಕೈಗೊಳ್ಳುವ ಸೌಭಾಗ್ಯ ನನಗೆ ಇತ್ತೀಚೆಗೆ ಪ್ರಾಪ್ತವಾಗಿತ್ತು.



ಮಂತ್ರಾಲಯ

**ಮಂತ್ರಾಲಯ ಯಾತ್ರೆ:** ದಿನಾಂಕ ೨೪.೧೧.೨೦೧೩ರಂದು ನಾನು ಮತ್ತು ಆಶ್ರಮದ ಸ್ವಯಂಸೇವಕರಾದ ರಾಜೇಶ್ ಬಾಬು ಇಬ್ಬರೂ ಮೈಸೂರಿನಿಂದ ಬೆಂಗಳೂರಿಗೆ ಹೊರಟೆವು. ಅಲ್ಲಿಂದ ಉದ್ಯಾನ್ ಎಕ್ಸ್‌ಪ್ರೆಸ್ ರೈಲಿನಲ್ಲಿ ಪ್ರಯಾಣ ಮಾಡಿ, ೨೫.೧೧.೨೦೧೩ರ ಬೆಳಗ್ಗೆ ೫.೩೦ಕ್ಕೆ ಮಂತ್ರಾಲಯ ರೋಡ್ ಎಂಬ ರೈಲ್ವೆನಿಲ್ದಾಣವನ್ನು ತಲುಪಿದೆವು. ಅಲ್ಲಿಂದ ಮಂತ್ರಾಲಯಕ್ಕೆ ಹನ್ನೆರಡು ಕಿ. ಮಿ. ದೂರ. ಅದನ್ನು ಬಸ್ಸಿನಲ್ಲಿ ಕ್ರಮಿಸಿ, ಬೆಳಗ್ಗೆ ೬.೧೫ ಕ್ಕೆ ಮಂತ್ರಾಲಯ ತಲುಪಿದೆವು. ಅಲ್ಲಿ ಹಲವಾರು ವಸತಿಗೃಹಗಳಿವೆ. ಸಾಮಾನುಗಳನ್ನು ಇಡಲು ಲಾಕರ್‌ಗಳ ವ್ಯವಸ್ಥೆಯೂ ಇದೆ. ನಮ್ಮ ಸಾಮಾನುಗಳನ್ನು ಅಂಥ ಒಂದು ಲಾಕರ್‌ನಲ್ಲಿ ಇಟ್ಟೆವು. ಅನತಿ ದೂರದಲ್ಲಿ ಹರಿಯುತ್ತಿರುವ ತುಂಗಭದ್ರಾ ನದಿಯಲ್ಲಿ ಸ್ನಾನ ಮಾಡಿ, ನಂತರ ಶ್ರೀರಾಘವೇಂದ್ರ ಸ್ವಾಮಿಗಳ ಬೃಂದಾವನದ ದರ್ಶನವನ್ನು ಮಾಡಲು ಹೊರಟೆವು. ಗುರುರಾಯರ ಮಠದ ಪಕ್ಕದಲ್ಲಿಯೇ ಕ್ಷೇತ್ರದೇವತೆಯಾದ ಮಂಚಾಲಮ್ಮನ ಗುಡಿಯಿದೆ. ಅಲ್ಲಿ ದೇವಿಯ ದರ್ಶನವನ್ನು ಪಡೆದುಕೊಂಡೆವು. ನಂತರ ಶ್ರೀಮಠದ ಒಳಕ್ಕೆ ಹೋಗಿ ಸರದಿಯಲ್ಲಿ ನಿಂತುಕೊಂಡು, ಗುರುರಾಯರ ಬೃಂದಾವನ ಮತ್ತು ಅದರ ಎದುರಿಗೇ ಇರುವ ಮುಖ್ಯಪ್ರಾಣ ದೇವರ ದರ್ಶನ ಪಡೆದೆವು. ಅಲ್ಲಿಯೇ ಸ್ವಲ್ಪಹೊತ್ತು ಕುಳಿತುಕೊಂಡಿದ್ದು, ನಂತರ ಹೊರಕ್ಕೆ ಬಂದು ಸುತ್ತಲಿನ ಪ್ರಾಕಾರವನ್ನು ಸುತ್ತುಹಾಕಿ ಶ್ರೀಮಠದ ಇತರ ಸ್ವಾಮೀಜಿಯವರ ಬೃಂದಾವನಗಳನ್ನೂ ದರ್ಶಿಸಿದೆವು. ಪಂಚಾಮೃತ ಪ್ರಸಾದ ತೆಗೆದುಕೊಂಡು, ಈಗಿನ ಪೀಠಾಧಿಪತಿಗಳ ದರ್ಶನ ಪಡೆದವು. ಪ್ರಾಕಾರದಲ್ಲಿ ಒಂದು ಕಡೆ ಪಂಡಿತರು ಮಠದಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಶಾಸ್ತ್ರಬೋಧನೆ ಮಾಡುತ್ತಿದ್ದರು. ಅದನ್ನೂ ಸ್ವಲ್ಪಕಾಲ ಆಲಿಸಿದೆವು.

ಇದಾದನಂತರ, ಮಂತ್ರಾಲಯದಿಂದ ೨೧ ಕಿ. ಮಿ. ದೂರದಲ್ಲಿರುವ ಗಾಣಧಾಳ ಎಂಬ ಊರಿಗೆ ಹೋದೆವು. ಅಲ್ಲಿ ಶ್ರೀಗುರುರಾಯರು ೧೨ ವರ್ಷ ಕಾಲ ತಪಸ್ಸು ಮಾಡಿದರಂತೆ. ಅಲ್ಲಿ ಅವರಿಗೆ ಪಂಚಮುಖಿ ಆಂಜನೇಯ ಸ್ವಾಮಿಯ ದರ್ಶನವಾಯಿತು ಎಂಬ ಐತಿಹ್ಯವಿದೆ. ಪಂಚಮುಖಿ ಆಂಜನೇಯಸ್ವಾಮಿಯ ದೇವಸ್ಥಾನವು ಚಿಕ್ಕ ಬೆಟ್ಟದ ಮೇಲೆ ಇದೆ. ಗರ್ಭಮಂದಿರದಲ್ಲಿ ಒಂದು ಹಾಸುಬಂಡೆಯಿದ್ದು, ಅಲ್ಲಿ ಶ್ರೀಗುರುರಾಯರು ತಪಸ್ಸಿಗೆ ಕುಳಿತುಕೊಂಡಿದ್ದರು ಎಂದು ಜನ ಹೇಳುತ್ತಾರೆ. ಹಾಗೆಯೇ ಇನ್ನೊಂದು ಬಂಡೆಯಲ್ಲಿ ಪಂಚಮುಖಿ ಆಂಜನೇಯನ ರೇಖಾಚಿತ್ರ ಕೆತ್ತಿರುವುದನ್ನು ನೋಡಬಹುದು. ಇವನ್ನೆಲ್ಲ ನೋಡಿಕೊಂಡು, ಮಂತ್ರಾಲಯಕ್ಕೆ ವಾಪಸ್ಸು ಬಂದೆವು. ಶ್ರೀಮಠದ ವತಿಯಿಂದ ನಡೆಸಲಾಗುತ್ತಿರುವ ಉಚಿತ ಪ್ರಸಾದನಿಲಯದಲ್ಲಿ ಮಧ್ಯಾಹ್ನ ಊಟ ಮಾಡಿ, ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡು, ಮಂತ್ರಾಲಯದಲ್ಲಿ ಇರುವ ಇತರ ದೇವಸ್ಥಾನಗಳಿಗೆ ಭೇಟಿಕೊಟ್ಟೆವು. ಸಂಜೆಯ ವೇಳೆಗೆ ಮತ್ತೆ ಮಠಕ್ಕೆ ಹೋಗಿ, ರಾತ್ರಿ ೮.೦೦ ರಿಂದ ೮.೩೦ರವರೆಗೆ ನಡೆಯುವ ರಥೋತ್ಸವ ಸೇವೆಯನ್ನು ನೋಡಿದೆವು. ಪ್ರತಿದಿನವೂ ರಾತ್ರಿಯ ಸಮಯದಲ್ಲಿ ರಾಯರ ಬೃಂದಾವನದ ಸುತ್ತಲೂ ಇರುವ ಪ್ರಾಕಾರದಲ್ಲಿ ಅವರ ಉತ್ಸವಮೂರ್ತಿಯನ್ನು ಹೂವುಗಳಿಂದ ಸಿಂಗರಿಸಿ, ಕ್ರಮವಾಗಿ ಬಂಗಾರ, ಬೆಳ್ಳಿ, ತಾಮ್ರ ಹಾಗೂ ಮರದ ರಥಗಳಲ್ಲಿ ಇಟ್ಟು, ಬೃಂದಾವನದ ಸುತ್ತ ಪ್ರದಕ್ಷಿಣೆ ಮಾಡಿಸುತ್ತಾರೆ. ಇದನ್ನು ನೋಡಿಕೊಂಡು, ರಾತ್ರಿ ಭೋಜನದ ನಂತರ ರಾತ್ರಿ ೯.೦೦ ಗಂಟೆಗೆ ಬಸ್ಸಿನಲ್ಲಿ ಶ್ರೀಶೈಲಕ್ಕೆ ಪ್ರಯಾಣ ಬೆಳೆಸಿದೆವು.

**ಶ್ರೀಶೈಲ ಯಾತ್ರೆ :** ೨೬.೧೧.೨೦೧೩ರ ಬೆಳಗ್ಗೆ ೭.೩೦ಕ್ಕೆ ಶ್ರೀಶೈಲವನ್ನು ತಲುಪಿದೆವು. ಅಲ್ಲಿನ ಖಾಸಗಿ ಛತ್ರವೊಂದರಲ್ಲಿ ಕೊಠಡಿಯನ್ನು ಬಾಡಿಗೆಗೆ ತೆಗೆದುಕೊಂಡು ಸ್ನಾನಪೂಜೆಗಳನ್ನು ಮುಗಿಸಿಕೊಂಡೆವು. ನಂತರ ದೇವಸ್ಥಾನಕ್ಕೆ ಹೋಗಿ, ಸುಮಾರು ಎರಡು ಗಂಟೆಗಳ ಕಾಲ ಸರದಿಯಲ್ಲಿ ನಿಂತುಕೊಂಡ ಬಳಿಕ ಶ್ರೀಶೈಲ ಮಲ್ಲಿಕಾರ್ಜುನಸ್ವಾಮಿಯ ದರ್ಶನವನ್ನು ಪಡೆದುಕೊಂಡೆವು. ದೇವಸ್ಥಾನದ ಪ್ರಾಕಾರದಲ್ಲಿರುವ ಇತರ

ಶಿವಾಲಯಗಳನ್ನು ಸಂದರ್ಶಿಸಿದೆವು. ಶ್ರೀಶೈಲವು ವೀರಶೈವರ ಪಂಚಪೀಠಗಳಲ್ಲಿ ಒಂದು. ಆ ಮಠಕ್ಕೆ ಹೋಗಿ ಅಲ್ಲಿರುವ ಆಚಾರ್ಯ ಪಂಡಿತಾರಾಧ್ಯರ ಮೂರ್ತಿಯ ದರ್ಶನವನ್ನು ಪಡೆದುಕೊಂಡೆವು. ಸಾಯಂಕಾಲ ಇನ್ನಿತರ ದೇವಸ್ಥಾನಗಳನ್ನು ನೋಡಿಕೊಂಡು ಬಂದೆವು. ಅವುಗಳಲ್ಲಿ ಮುಖ್ಯವಾದುವು: ೧. ಸಾಕ್ಷಿ ಗಣಪತಿ, ೨. ಹಟಕೇಶ್ವರ ಶಿವ ೩. ಶ್ರೀ ಲಲಿತಾ ಪರಮೇಶ್ವರಿ ೪. ಪಾಲಧಾರಾ ಮತ್ತು ಪಂಚಧಾರಾ (ನೈಸರ್ಗಿಕ ನೀರಿನ ಝರಿಗಳು) ೫. ಶ್ರೀ ಶಿಖರೇಶ್ವರ. ಮರಳಿ ಬಂದು


ಶ್ರೀಶೈಲ ದೇವಸ್ಥಾನ

ಸಂಜೆ ಸುಮಾರು ೬.೩೦ ರ ವೇಳೆಗೆ 'ಮಲ್ಲಮ್ಮನ ಕಣ್ಣೀರು' ಎನ್ನುವ ಸ್ಥಳಕ್ಕೆ ಕಾಲ್ನಡಿಗೆಯಲ್ಲಿಯೇ ಹೋದೆವು. ಹೇಮರೆಡ್ಡಿ ಮಲ್ಲಮ್ಮ ೧೨ನೇ ಶತಮಾನದ ಶಿವಭಕ್ತೆ. ಆಕೆ ತಪಸ್ಸು ಮಾಡಿದ ಸ್ಥಳ ಇದು. ಮಲ್ಲಮ್ಮ ತಪಸ್ಸು ಮಾಡಿದಾಗ, ಶಿವನ ಮೇಲಿನ ಭಕ್ತಿಯಿಂದ ಆನಂದಬಾಷ್ಪ ಸುರಿಸಿದಳಂತೆ. ಆ ಜಾಗದಲ್ಲಿ ಒಂದು ಹೆಬ್ಬಂಡೆಯ ಮೇಲೆ ನೀರು ಹನಿಹನಿಯಾಗಿ ಹರಿದುಬರುತ್ತದೆ. ಹೀಗಾಗಿ ಈ ಜಾಗವನ್ನು 'ಮಲ್ಲಮ್ಮನ ಕಣ್ಣೀರು' ಎನ್ನುತ್ತಾರೆ. ಈ ಹೆಬ್ಬಂಡೆಯ ಪಕ್ಕದಲ್ಲಿಯೇ ಕೈಯಲ್ಲಿ ಇಷ್ಟಲಿಂಗವನ್ನು ಹಿಡಿದು ಪೂಜೆ ಮಾಡುತ್ತಿರುವ ಹೇಮರೆಡ್ಡಿ ಮಲ್ಲಮ್ಮನ ಶಿಲಾವಿಗ್ರಹವಿದೆ. ಇದರ ಸುತ್ತಲೂ ಭವ್ಯವಾದ ಪ್ರಾರ್ಥನಾ ಮಂದಿರವನ್ನು ನಿರ್ಮಿಸಿದ್ದಾರೆ. ಮತ್ತೆ ಶ್ರೀ ಮಲ್ಲಿಕಾರ್ಜುನಸ್ವಾಮಿಯ ದರ್ಶನ ಮಾಡಿ, ಶ್ರೀಶೈಲ ಜಗದ್ಗುರುಗಳ ನಿವಾಸಕ್ಕೆ ತೆರಳಿ ಅವರ ದರ್ಶನ ವನ್ನು ಪಡೆದುಕೊಂಡೆವು.

ಮರುದಿನ ಅಂದರೆ ೨೭.೧೧.೨೦೧೩ರಂದು ಬೆಳಗ್ಗೆ ಸುಮಾರು ೭.೩೦ ಗಂಟೆಗೆ 'ಪಾತಾಳ ಗಂಗೆ' ಎಂಬ ಸ್ಥಾನಕ್ಕೆ ನಡೆದುಕೊಂಡೇ ಹೋದೆವು. ಅಲ್ಲಿ ಹಲವಾರು ಮೆಟ್ಟಿಲುಗಳನ್ನು ಇಳಿದುಕೊಂಡು ಹೋಗಿ, ಸ್ನಾನ ಮಾಡಿ ಪೂಜೆ ಸಲ್ಲಿಸಿದೆವು. ಅಲ್ಲಿಂದ ಅಕ್ಕ ಮಹಾದೇವಿಯ ಗುಹೆಗೆ ಒಂದು ದೋಣಿಯಲ್ಲಿ ಪ್ರಯಾಣ ಮಾಡಿದೆವು. ಸುಮಾರು ೧೬ ಕಿ. ಮಿ. ಕ್ರಮಿಸಿದ ನಂತರ ಆ ಗುಹೆಯನ್ನು ತಲುಪಿದೆವು. ದಾರಿಯುದ್ದಕ್ಕೂ ನಯನ ಮನೋಹರವಾದ ಸುಂದರ ಪ್ರಾಕೃತಿಕ ದೃಶ್ಯಗಳು; ಎರಡೂ ಕಡೆ ಹಚ್ಚಹಸುರಾದ ಬೆಟ್ಟಗಳ ಸಾಲು; ಪ್ರಶಾಂತವಾಗಿ ಇರುವ ಕೃಷ್ಣಾ ನದಿಯ ಹಿನ್ನೀರು (backwater). ದೋಣಿಯಾನ ಮುಗಿದ ನಂತರ, ಬೆಟ್ಟದ ಮೇಲಕ್ಕೆ ಐದು ನಿಮಿಷಗಳ ಕಾಲ ಹತ್ತಿದರೆ, ರುದ್ರಭಯಂಕರವಾದ ಗುಹೆಯ ವಿಹಂಗಮ ನೋಟ ಕಂಡುಬರುತ್ತದೆ. ಇದು ಎರಡು ಬೆಟ್ಟಗಳ ಮಧ್ಯದಲ್ಲಿ ಪ್ರಾಕೃತಿಕವಾಗಿ ನಿರ್ಮಾಣವಾಗಿರುವ ನೈಸರ್ಗಿಕ ಗುಹೆ. ಅಕ್ಕ ಮಹಾದೇವಿಯು ಇಲ್ಲಿ ಹಲವಾರು ವರ್ಷಗಳ ಕಾಲ ಇಷ್ಟಲಿಂಗ ಪೂಜಾನುಷ್ಠಾನದ ಮೂಲಕ ತಪಸ್ಸು ಮಾಡಿದಳೆಂದು ಐತಿಹ್ಯವಿದೆ. ಇಲ್ಲಿಂದ ಇನ್ನೂ ಮುಂದೆ ಇರುವ ಕದಳಿ ವನದಲ್ಲಿ ಆಕೆ ಬಯಲಾದಳೆಂಬುದು ಜನರ ನಂಬಿಕೆ. ಗುಹೆಯೊಳಗೆ ಅಂಧಕಾರ. ನಮ್ಮ ದೋಣಿಯವನೇ ನಮ್ಮ ಮಾರ್ಗದರ್ಶಿ. ಅವನು ಟಾರ್ಚ್ ಹಿಡಿದುಕೊಂಡು ನಮ್ಮನ್ನು ಒಳಗೆ ಕರೆದುಕೊಂಡು ಹೋದನು. ಸುಮಾರು ೩೦ – ೩೫ ಮೀಟರ್‌ಗಳಷ್ಟು ಒಳಗೆ ಹೋಗಬೇಕು. ಒಳಗೆ ಹೋದಂತೆಲ್ಲ, ಬಾಗಿ ಕುಳಿತುಕೊಂಡು ಒಬ್ಬೊಬ್ಬರೇ ಹೋಗಿ ನೋಡಿಕೊಂಡು ಬರಬೇಕಾಗುತ್ತದೆ. ಅಕ್ಕಮಹಾದೇವಿ ಗುಹೆಯಿಂದ ಪಾತಾಳ ಗಂಗೆಗೆ ಮರಳಿ ಬರಲು ಒಂದು ಗಂಟೆ ಕಾಲ ಮತ್ತೆ ದೋಣಿ ಪ್ರಯಾಣ ಮಾಡಬೇಕಾಗುತ್ತದೆ. ಪಾತಾಳಗಂಗೆಯಿಂದ ರೋಪ್‌ವೇ ಮೂಲಕ ಬೆಟ್ಟದ ಮೇಲಕ್ಕೆ ಹೋಗಿ, ನಂತರ ಛತ್ರಕ್ಕೆ ವಾಪಸಾದೆವು. ಸಂಜೆ ೪.೩೦ಕ್ಕೆ ಬಸ್ಸಿನ ಮೂಲಕ ಹೈದರಾ ಬಾದಿಗೆ ಹೊರಟೆವು. ೨೭.೧೧.೨೦೧೩ ರಾತ್ರೆ ೧೧.೩೦ ಗಂಟೆಗೆ ಹೈದರಾಬಾದ್ ಆಶ್ರಮವನ್ನು ತಲುಪಿ ವಿಶ್ರಾಂತಿ ಪಡೆದೆವು.

**ಹೈದರಾಬಾದ್, ನಾಗಪುರ, ಶೇಗಾಂವ್:** ದಿನಾಂಕ ೨೮.೧೧.೨೦೧೩ರಂದು ಹೈದರಾಬಾದ್ ಆಶ್ರಮವನ್ನು ನೋಡಿದೆವು. ಅಲ್ಲಿ ನಡೆಯುತ್ತಿರುವ ಕೆಲವು ಚಟುವಟಿಕೆಗಳು ಹೀಗಿವೆ: ೧. ಶ್ರೀರಾಮಕೃಷ್ಣರ ದೇವಾಲಯ ೨. ವಿವೇಕಾನಂದ ಇನ್ಸ್ಟಿಟ್ಯೂಟ್ ಆಫ್ ಹ್ಯೂಮನ್ ಎಕ್ಸೆಲೆನ್ಸ್ (ವ್ಯಕ್ತಿತ್ವ ವಿಕಸನ ತರಬೇತಿ ಕೇಂದ್ರ) ೩. ಇನ್ಸ್ಟಿಟ್ಯೂಟ್ ಆಫ್ ಲಾಂಗ್ವೇಜಸ್ (ಭಾಷಾ ಕಲಿಕಾ ಕೇಂದ್ರ) ೪. ತೆಲುಗು ಭಾಷೆಯ ಪುಸ್ತಕಗಳ ಪ್ರಕಾಶನ ೫. 'ರಾಮಕೃಷ್ಣ ಪ್ರಭ' ಪತ್ರಿಕೆಯ ಪ್ರಕಾಶನ ೬. ಉಚಿತ ಔಷಧಾಲಯ ೭. 'ಗೀತಾದರ್ಶನ' ಪ್ರದರ್ಶನ ೮. ಉಪನಿಷತ್ ದರ್ಶನ ಪ್ರದರ್ಶನ ೯. ಮಧ್ಯಾಹ್ನ ಬಡಜನರಿಗೆ ಉಚಿತ ಭೋಜನ ವ್ಯವಸ್ಥೆ ಮುಂತಾದವು. ಇವೆಲ್ಲವನ್ನೂ ನೋಡಿಕೊಂಡು, ಮರುದಿನ ಬೆಳಗ್ಗೆ ೯.೦೦ ಗಂಟೆಗೆ ರೈಲಿನಲ್ಲಿ ಹೊರಟು, ರಾತ್ರಿ ಸುಮಾರು ೭.೦೦ ಗಂಟೆಗೆ ನಾಗಪುರವನ್ನು ತಲುಪಿದೆವು. ಅಂದು ರಾತ್ರಿ ಅಲ್ಲಿನ ರಾಮಕೃಷ್ಣ ಮಠದಲ್ಲಿ ತಂಗಿ, ಮರುದಿನ ಬೆಳಗ್ಗೆ ೧೧.೦೦ ಗಂಟೆಗೆ ಶೇಗಾಂವ್ ಎಂಬ ಊರಿಗೆ ಪ್ರಯಾಣ ಬೆಳೆಸಿದೆವು. ಸಂತ ಗಜಾನನ ಮಹಾರಾಜ್ ಎನ್ನುವವರು ಮಹಾರಾಷ್ಟ್ರದ ಒಬ್ಬ ಮಹಾನ್ ಸಂತರು. ಶೇಗಾಂವ್ ಅವರ ಲೀಲಾಭೂಮಿ. ರೈಲಿನಲ್ಲಿ ೫ ಗಂಟೆಗಳ ಪ್ರಯಾಣ ಮಾಡಿದ ಬಳಿಕ ನಾವು ಶೇಗಾಂವ್ ತಲುಪಿದೆವು. ಅಲ್ಲಿನ ಎಸ್. ಜಿ. ಬಿ. ಇಂಜಿನಿಯರಿಂಗ್ ಕಾಲೇಜಿನ ಅತಿಥಿಗೃಹದಲ್ಲಿ ನಮಗೆ ವಸತಿ ವ್ಯವಸ್ಥೆ ಮಾಡಿದ್ದರು. ಕಾಲೇಜಿನ ಆವರಣ ಬಹಳ ವಿಶಾಲವಾಗಿತ್ತು. ಅಲ್ಲೊಂದು ಉತ್ತಮವಾದ ಗ್ರಂಥಾಲಯವೂ ಇದೆ. ಕಾಲೇಜಿನ ಅಂಗಣ ದಲ್ಲಿ ಪ್ರಾರ್ಥನಾಮಂದಿರವೂ ಇದೆ. ಅಲ್ಲಿ ಸಂತ ಗಜಾನನ

ಬಾಬಾ ಅವರ ಭಾವಚಿತ್ರದ ಜೊತೆಗೆ ದಿವ್ಯತ್ರಯರ ಭಾವಚಿತ್ರಗಳೂ ಇವೆ. ಇದಲ್ಲದೆ, ರಾಮಕೃಷ್ಣ ಆಶ್ರಮಗಳಲ್ಲಿ ಇರುವ ಹಾಗೆ ಅಲ್ಲಿಯೂ ಆರತಿ ಹಾಗೂ ಭಜನೆಗಳು ಪ್ರತಿದಿನ ಸಾಯಂಕಾಲ ತಪ್ಪದೆ ಜರಗುತ್ತವೆ. ಕೊನೆಯಲ್ಲಿ ಗಜಾನನ ಬಾಬಾ ಅವರ ಭಾವಚಿತ್ರಕ್ಕೆ ಕೂಡ ಆರತಿ ನಡೆಯುತ್ತದೆ.


ಶೇಗಾಂವ್‌ನ ಆಧ್ಯಾತ್ಮಿಕ ಮತ್ತು ಮನರಂಜನೆಯ ಪಾರ್ಕ್

ಮರುದಿನ ಅಂದರೆ ೩೧. ೧೧. ೨೦೧೩ ರಂದು ಬೆಳಗ್ಗೆ ಉಪಾಹಾರ ಮುಗಿಸಿಕೊಂಡು, ಸಂತ ಗಜಾನನ ಬಾಬಾ ಅವರ ಸಮಾಧಿಮಂದಿರಕ್ಕೆ ಹೋದೆವು. ಅಲ್ಲಿ ಭಕ್ತರ ದೊಡ್ಡ ಸಾಲೇ ನೆರೆದಿತ್ತು. ದರ್ಶನದ ನಂತರ, ಬಂದ ಭಕ್ತರಿಗೆ ಉಚಿತ ದಾಸೋಹದ ವ್ಯವಸ್ಥೆ ಇತ್ತು. ಬೇರೆ ಊರುಗಳಿಂದ ಬಂದ ಭಕ್ತರಿಗೆ ಉಳಿದುಕೊಳ್ಳಲು ಶುಲ್ಕಸಹಿತ ವಸತಿವ್ಯವಸ್ಥೆ ಕೂಡ ಇದೆ. ಅಲ್ಲಿಂದ ಆನಂದ ಸಾಗರ ನೋಡಲು ತೆರಳಿದೆವು. 'ಆನಂದ ಸಾಗರ' ಎನ್ನುವುದು ಆಧ್ಯಾತ್ಮಿಕ ಮತ್ತು ಮನರಂಜನೆಯ ಉದ್ಯಾನ. ಇದನ್ನು ಗಜಾನನ ಬಾಬಾ ದೇವಸ್ಥಾನದ ಟ್ರಸ್ಟ್‌ನವರೇ ನೋಡಿಕೊಳ್ಳುತ್ತಾರೆ. ಇದರ ಒಟ್ಟು ವಿಸ್ತೀರ್ಣ ೩೫೦ ಎಕರೆ. ಇಲ್ಲಿ ದೇಶದ ಬಹುತೇಕ ಎಲ್ಲ ಸಾಧುಸಂತರ ವಿಗ್ರಹಗಳನ್ನು ಸ್ಥಾಪಿಸಿದ್ದಾರೆ. ಉದ್ಯಾನ ದೊಳಗಡೆ ಇರುವ ಕೆಲವು ಆಕರ್ಷಣೀಯ ಸಂಗತಿಗಳು ಹೀಗಿವೆ: ೧. ಸಂತ ಮಂಟಪ ೨. ಧ್ಯಾನ ಮಂಟಪ ೩. ವಿವಿಧ ದೇವದೇವಿಯರ ದೇವಸ್ಥಾನಗಳು ೪. ದೋಣಿಯಾನವಿರುವ ಸರೋವರ (ಇದರ ಮಧ್ಯೆ ದ್ವೀಪಗಳು ಕೂಡ ಇವೆ) ೫. ಪುಟಾಣಿ ರೈಲು ೬. ಮತ್ಸ್ಯಾಲಯ (Aquarium) ೭. ಮಕ್ಕಳಿಗಾಗಿ ಆಟದ ಸೌಲಭ್ಯ ೮. ಸಂಗೀತ ಕಾರಂಜಿ ೯. ಕಡಮೆ ದರದ ಹೋಟೆಲ್‌ಗಳು.

ಮೇಲಿನವುಗಳಲ್ಲಿ ಸಂತಮಂಟಪ ಮತ್ತು ಧ್ಯಾನ ಮಂಟಪಗಳು ವಿಶಿಷ್ಟವಾದುವು. ಧ್ಯಾನಮಂಟಪದಲ್ಲಿ ಸಂತ ಗಜಾನನ ಬಾಬಾ ಅವರ ಭಾವಚಿತ್ರದ ಜೊತೆಗೆ ದಿವ್ಯತ್ರಯರ ಭಾವಚಿತ್ರವಿರುವುದೂ ವಿಶೇಷ. ಧ್ಯಾನಮಂಟಪದ ಮೇಲೆ ಮತ್ತೊಂದು ಮಂಟಪವಿದೆ. ಅದರಲ್ಲಿ ಶ್ರೀರಾಮಕೃಷ್ಣರ ಹಾಗೂ ಸ್ವಾಮಿ ವಿವೇಕಾನಂದರ ಮೂರ್ತಿಗಳನ್ನು ಪ್ರತಿಷ್ಠಾಪಿಸಿದ್ದಾರೆ. ಧ್ಯಾನಮಂಟಪದಲ್ಲಿ ಸ್ವಲ್ಪ ಹೊತ್ತು ಧ್ಯಾನ ಮಾಡಿದೆವು. ನಂತರ ಶಿವ, ಮಾರುತಿ, ವಿಷ್ಣು, ದೇವಿ, ನವಗ್ರಹ ದೇವಸ್ಥಾನಗಳ ದರ್ಶನ ಮಾಡಿದೆವು. ಮಧ್ಯಾಹ್ನ ನಾಗಪುರಕ್ಕೆ ವಾಪಸ್ಸು ಪ್ರಯಾಣ ಬೆಳೆಸಿದೆವು. ಅಂದು ರಾತ್ರಿ ಅಲ್ಲಿನ ರಾಮಕೃಷ್ಣ ಮಠದಲ್ಲಿಯೇ ವಿಶ್ರಾಂತಿ ಪಡೆದು, ಮರುದಿನ ಬೆಳಗ್ಗೆ ಅಂದರೆ ೧.೧೨.೨೦೧೩ ರಂದು ಆಶ್ರಮದ ಸೇವಾಕಾರ್ಯಗಳನ್ನೆಲ್ಲ ನೋಡಿದೆವು. ಅವುಗಳಲ್ಲಿ ಕೆಲವು ಹೀಗಿವೆ: ೧. ಶ್ರೀರಾಮಕೃಷ್ಣರ ದೇವಾಲಯ ೨. ಬಡ ಕಾಲೇಜು ವಿದ್ಯಾರ್ಥಿಗಳಿಗಾಗಿ ಉಚಿತ ಹಾಸ್ಟೆಲ್ (೩೦ ವಿದ್ಯಾರ್ಥಿಗಳಿಗಾಗಿ) ೩. ಫಿಸಿಯೋಥೆರಪಿ ಸೆಂಟರ್ ೪. ಗ್ರಂಥಾಲಯ ೫. ಹಿಂದಿ ಮತ್ತು ಮರಾಠಿ ಭಾಷೆಗಳಲ್ಲಿ ಪುಸ್ತಕ ಪ್ರಕಾಶನ ೬. 'ಜೀವನ ವಿಕಾಸ್' ಎನ್ನುವ ಮರಾಠಿ ಮಾಸಪತ್ರಿಕೆಯ ಪ್ರಕಟಣೆ. ಇವೆಲ್ಲವನ್ನೂ ನೋಡಿಕೊಂಡು, ಕೆಲವು ಸ್ಥಳೀಯ ದೇವಸ್ಥಾನಗಳನ್ನು ಸಂದರ್ಶಿಸಿದೆವು. ರಾತ್ರಿ ೯.೦೦ ಗಂಟೆಗೆ ರೈಲಿನಲ್ಲಿ ಮಧ್ಯಪ್ರದೇಶದ ರಾಜಧಾನಿಯಾದ ಭೂಪಾಲಿಗೆ ಪ್ರಯಾಣ ಬೆಳೆಸಿದೆವು.

**ಭೂಪಾಲ್ :** ೩.೧೨.೨೦೧೩ರ ಬೆಳಗ್ಗೆ ೪.೪೫ಕ್ಕೆ ಭೂಪಾಲ್ ತಲುಪಿದೆವು. ಅಲ್ಲಿನ ರಾಮಕೃಷ್ಣ ಮಿಷನ್ ಆಶ್ರಮವನ್ನು ಸೇರಿ, ಅಲ್ಲಿಯ ಚಟುವಟಿಕೆಗಳನ್ನು ವೀಕ್ಷಿಸಿ ಪರಿಚಯ ಮಾಡಿಕೊಂಡೆವು. ಶ್ರೀರಾಮಕೃಷ್ಣ ಮಂದಿರದ ಜೊತೆಗೆ, ಆಶ್ರಮವು 'ವಿವೇಕಾನಂದ ವಿದ್ಯಾಪೀಠ' ಎನ್ನುವ ಶಾಲೆಯನ್ನೂ ನಡೆಸುತ್ತಿದೆ. ಪಕ್ಕದಲ್ಲಿ 'ಗಾಯತ್ರಿ ಮಂದಿರ ಆಶ್ರಮ' ಇದೆ. ಅಂದು ಸಂಜೆ ಭೂಪಾಲ್ ನಗರದಿಂದ ೩೨ ಕಿ. ಮಿ. ದೂರ ವಿರುವ 'ಭೋಜ್‌ಪುರ ಶಿವ' ದೇವಸ್ಥಾನವನ್ನು ನೋಡಲು ಹೋದೆವು. ಇದನ್ನು ಭೋಜರಾಜನು ೧೧ನೆಯ ಶತಮಾನದಲ್ಲಿ ಕಟ್ಟಿಸಿದನು ಎನ್ನುವ ಐತಿಹ್ಯ ಇದೆ. ದೇವಸ್ಥಾನದ ಗೋಪುರದ ಎತ್ತರ ೧೦೬ ಅಡಿ. ಗರ್ಭಗುಡಿಯೇ ೭೦ ಅಡಿ ಎತ್ತರವಿದೆ. ಅದರ ಮಧ್ಯಭಾಗದಲ್ಲಿ ೧೮ ಅಡಿ ಎತ್ತರದ ಶಿವಲಿಂಗವಿದೆ. ಏಕಶಿಲಾಮೂರ್ತಿಯಾದ ಇದರ ಸುತ್ತಳತೆ ೭.೫ ಅಡಿ. ಇಷ್ಟು ದೊಡ್ಡ ಶಿವಲಿಂಗಕ್ಕೆ ನಿತ್ಯ ಪೂಜೆಯೇನೂ ನಡೆಯುವುದಿಲ್ಲ. ಗರ್ಭಗುಡಿಯ ಮುಂದೆ ಎರಡು ಚಿಕ್ಕ ಶಿವಲಿಂಗಗಳಿದ್ದು, ಜನರು ಅವಕ್ಕೇ ಪೂಜೆ ಸಲ್ಲಿಸುತ್ತಾರೆ. ದೇವಸ್ಥಾನಕ್ಕೆ ಸ್ವಲ್ಪ ದೂರದಲ್ಲಿ, ಬೆಟ್ಟದ ಕೆಳಗಡೆ ಬೆತ್ವಾ ನದಿ ಹರಿಯುತ್ತಿದೆ. ದೇವಸ್ಥಾನದ ಸುತ್ತಮುತ್ತಲ ಪ್ರಕೃತಿ ಸೌಂದರ್ಯ ಅತ್ಯಂತ ಮನೋಹರ ಮತ್ತು ರಮಣೀಯವಾಗಿದೆ.

**ಉಜ್ಜೈನಿ :** ಮರುದಿನ ಬೆಳಗ್ಗೆ ಉಜ್ಜೈನಿಗೆ ಪ್ರಯಾಣ ಬೆಳೆಸಿದೆವು. ಅಲ್ಲಿನ ರಾಮಕೃಷ್ಣ ಆಶ್ರಮದಲ್ಲಿ ಉಳಿದುಕೊಂಡೆವು. ಮಧ್ಯಾಹ್ನ ಸ್ಥಳೀಯ ದೇವಾಲಯಗಳನ್ನು ನೋಡಲು ಹೋದೆವು. ಅದಕ್ಕಾಗಿ ನಿಗದಿಯಾಗಿರುವ ಒಂದು ಬಸ್ಸಿನಲ್ಲಿ ಕುಳಿತು, ಮುಂದಿನ ದೇವಸ್ಥಾನಗಳನ್ನು ನೋಡಿದೆವು: ೧. ಬಡೇ ಗಣೇಶ್‌ಜಿ ಮಂದಿರ್ ೨. ಹರಸಿದ್ಧ ಮಾತಾ ಮಂದಿರ ೩. ಚಾರ್‌ಧಾಮ ಮಂದಿರ್ ೪. ವೇದಶಾಲಾ (ಜಂತರ್ ಮಂತರ್) ೫. ಶನಿ ಶಕ್ತಿ ಪೀಠ ೬. ಚಿಂತಾಮಣಿ ಗಣೇಶ್ ೭. ಕ್ಷಿಪ್ರಾ ನದೀ ತಟದಲ್ಲಿರುವ ರಾಮಘಾಟ್ (ಅರ್ಧ ಕುಂಭ ಮೇಳ ನಡೆಯುವ ಸ್ಥಳ) ೮. ಭರ್ತೃಹರಿ ಗುಹೆ ೯. ಗಢ್ ಕಾಳಿಕಾ ಮಂದಿರ್ (ಕವಿರತ್ನ ಕಾಳಿದಾಸನಿಗೆ ಕಾಳೀಮಾತೆ ದರ್ಶನವಿತ್ತ ದೇಗುಲ) ೧೦. ಕಾಲಭೈರವ ಮಂದಿರ ೧೧. ಮಂಗಳನಾಥ

ಮಂದಿರ್ (ಶಿವಲಿಂಗರೂಪದಲ್ಲಿರುವ ಮಂಗಳಗ್ರಹಕ್ಕೆ ಮುಡಿಪಾದ ಮಂದಿರ), ೧೨. ಸಾಂದೀಪನಿ ಆಶ್ರಮ (ಶ್ರೀಕೃಷ್ಣ ಮತ್ತು ಸುದಾಮರು ವಿದ್ಯಾಭ್ಯಾಸ ಮಾಡಿದ ಸ್ಥಳ).

ಇವನ್ನೆಲ್ಲ ನೋಡುವ ಹೊತ್ತಿಗೆ ಸಂಜೆ ೬ ಗಂಟೆಯಾಯಿತು. ನಂತರ, ಉಜ್ಜೈನಿಯ ಪ್ರಸಿದ್ಧ ಮಹಾಕಾಲೇಶ್ವರ ಜ್ಯೋತಿರ್ಲಿಂಗದ ದರ್ಶನ ಮಾಡಿದೆವು. ಲಿಂಗಕ್ಕೆ ಗಂಗಾಜಲದಿಂದ ಅಭಿಷೇಕ ಮತ್ತು ಬಿಲ್ವಾರ್ಚನೆ ಮಾಡಿ, ಗರ್ಭಮಂದಿರದ ಹೊರಗಡೆ ಕುಳಿತುಕೊಂಡು, ಸ್ತೋತ್ರಪಠಣ ಮತ್ತು ಜಪ ಮಾಡಿದೆವು. ಸುಮಾರು ೭.೦೦ ಗಂಟೆಯ ಹೊತ್ತಿಗೆ ಮಹಾಕಾಲೇಶ್ವರನಿಗೆ ಸಂಧ್ಯಾರತಿ ನಡೆಯಿತು. ನಂತರ ಅಲ್ಲಿನ ಆವರಣದಲ್ಲಿರುವ ಇತರ ದೇವಸ್ಥಾನಗಳನ್ನು ನೋಡಿಕೊಂಡು, ಆಶ್ರಮಕ್ಕೆ ವಾಪಸ್ಸು ಬಂದೆವು. ಮರುದಿನ ಬೆಳಗ್ಗೆ ಮತ್ತೆ ಜ್ಯೋತಿರ್ಲಿಂಗದ ದರ್ಶನ ಮಾಡಿದೆವು. ದೇವಸ್ಥಾನದಲ್ಲಿಯೇ ಕುಳಿತು, ಸ್ತೋತ್ರಪಾಠ, ಜಪ, ಧ್ಯಾನಗಳನ್ನು ಮಾಡಿಕೊಂಡೆವು.

**ಓಂಕಾರೇಶ್ವರ:** ೫.೧೨.೨೦೧೩ರಂದು ಮಧ್ಯಾಹ್ನ ೨.೦೦ ಗಂಟೆಗೆ ಇಂದೋರ್ ನಗರಕ್ಕೆ ಪ್ರಯಾಣ ಮಾಡಿದೆವು. ಅಲ್ಲಿನ ರಾಮಕೃಷ್ಣ ಆಶ್ರಮದಲ್ಲಿ ಉಳಿದುಕೊಂಡೆವು. ಆಶ್ರಮವು 'ವಿವೇಕಾನಂದ ವಿದ್ಯಾಪೀಠ' ಎನ್ನುವ ಶಾಲೆಯನ್ನು ನಡೆಸುತ್ತಿದೆ. ಹಾಗೆಯೇ ಒಂದು ಫಿಸಿಯೋಥೆರಪಿ ಕೇಂದ್ರವನ್ನೂ ನಡೆಸುತ್ತಿದೆ. ಅಲ್ಲದೆ, ಇಲ್ಲಿ ಶ್ರೀರಾಮಕೃಷ್ಣರ ಒಂದು ಚಿಕ್ಕ ಮಂದಿರವೂ ಇದೆ. ಮರುದಿನ, ಅಂದರೆ ೬.೧೨.೨೦೧೩ರಂದು ಬಸ್ಸಿನಲ್ಲಿ ಓಂಕಾರೇಶ್ವರಕ್ಕೆ ಪಯಣಿಸಿದೆವು. ಓಂಕಾರೇಶ್ವರದಲ್ಲಿ ರಾಮಕೃಷ್ಣ ಮಹಾಸಂಘಕ್ಕೆ ಸೇರಿದ ಒಂದು ಸಾಧುಕುಟೀರವಿದ್ದು, ಅಲ್ಲಿ ಸಾಧುಗಳು ಉಳಿದುಕೊಂಡು ಧ್ಯಾನಜೀವನ ನಡೆಸುವ ಅವಕಾಶ ವಿದೆ. ಓಂಕಾರೇಶ್ವರ ಕ್ಷೇತ್ರದ ಬಗ್ಗೆ ಎರಡು ಮಾತುಗಳು: ಈ ಕ್ಷೇತ್ರವು ನರ್ಮದಾ ನದಿಯ ಮಧ್ಯದಲ್ಲಿರುವ ಒಂದು ದ್ವೀಪ. ಇಲ್ಲಿರುವ ಜ್ಯೋತಿರ್ಲಿಂಗವನ್ನು 'ಓಂಕಾರೇಶ್ವರ' ಎಂದು ಕರೆಯುತ್ತಾರೆ. ಪ್ರಾಚೀನ ಕಾಲದಿಂದಲೂ ಇದೊಂದು ಪ್ರಸಿದ್ಧ ಪುಣ್ಯಕ್ಷೇತ್ರ. ನೂರಾರು ಸಾಧುಗಳು ಇಲ್ಲಿ ತಂಗಿ ತಪಸ್ಸು ಮಾಡಿದ ಕ್ಷೇತ್ರವಿದು. ಕೇರಳದಿಂದ ಬಂದ ಶಂಕರ ಎಂಬ ಬಾಲಕ ಇಲ್ಲಿ ತಂಗಿದ್ದ ಗೋವಿಂದ ಭಗವತ್ಪಾದರೆಂಬ ಮಹಾತ್ಮರನ್ನು ದರ್ಶಿಸಿದನು. ಅವರ ಅನುಗ್ರಹದಿಂದ ಸಂನ್ಯಾಸವನ್ನು ಪಡೆದುಕೊಂಡು, 'ಶಂಕರಾಚಾರ್ಯ'ರೆಂಬ ಹೆಸರಿನಿಂದ ಪ್ರಖ್ಯಾತರಾದರು. ಹೀಗೆ 'ಶಂಕರ' ಶಂಕರಾಚಾರ್ಯರಾದ ಪುಣ್ಯಕ್ಷೇತ್ರ ಈ ಓಂಕಾರೇಶ್ವರ.

ಇಲ್ಲಿಂದ ಪೂರ್ವದಿಕ್ಕಿಗೆ ಮಧ್ಯಪ್ರದೇಶ ಸರ್ಕಾರದವರು ಒಂದು ದೊಡ್ಡ ಅಣೆಕಟ್ಟನ್ನು ಕಟ್ಟಿದ್ದಾರೆ. ಆ ಅಣೆಕಟ್ಟಿನಿಂದ ಬಿಡುವ ನೀರು ಎರಡು ಕವಲುಗಳಾಗುತ್ತದೆ. ಆ ಎರಡು ಕವಲುಗಳು ದ್ವೀಪವನ್ನು ಬಳಸಿಕೊಂಡು, ಪಶ್ಚಿಮದಿಕ್ಕಿನಲ್ಲಿ ಮತ್ತೆ ಸೇರಿ 'ಸಂಗಮ' ಉಂಟಾಗುತ್ತದೆ (ನಮ್ಮ ಶ್ರೀರಂಗಪಟ್ಟಣದಲ್ಲಿರುವಂತೆ). ಈ ಎರಡು ಕವಲುಗಳಲ್ಲಿ ಒಂದಕ್ಕೆ 'ನರ್ಮದಾ' ಎನ್ನುತ್ತಾರೆ. ಮತ್ತೊಂದಕ್ಕೆ 'ಕಾವೇರಿ' ಎನ್ನುತ್ತಾರೆ. ಓಂಕಾರೇಶ್ವರ ದ್ವೀಪದಲ್ಲಿ ವಿವಿಧ ಸಾಧುಸಂಪ್ರದಾಯಗಳಿಗೆ ಸೇರಿದ ಹಲವಾರು ಮಠಗಳಿವೆ. ನರ್ಮದೆಯ ಇನ್ನೊಂದು ತೀರದಲ್ಲಿ ಅಮಲೇಶ್ವರ ದೇವಸ್ಥಾನವಿದೆ. ಹಿಂದಿನ ಕಾಲದಲ್ಲಿ, ಮಳೆಗಾಲದಲ್ಲಿ ನದಿಯಲ್ಲಿ ಪ್ರವಾಹ ಬಂದಾಗ, ಜನರು ಓಂಕಾರೇಶ್ವರನ ದರ್ಶನಕ್ಕೆ ಬರಲು ಸಾಧ್ಯವಾಗುತ್ತಿರಲಿಲ್ಲ. ಅದಕ್ಕೆಂದೇ ಈ ದೇವಸ್ಥಾನವನ್ನು ನಿರ್ಮಿಸಿ, ಅದನ್ನೇ ಓಂಕಾರೇಶ್ವರವೆಂದು ಕರೆದು ಪೂಜಿಸುತ್ತಿದ್ದರು ಎಂಬ ಐತಿಹ್ಯವಿದೆ. ಹಾಗೆಯೇ ಓಂಕಾರೇಶ್ವರ ದ್ವೀಪದ ಪರಿಕ್ರಮ ಮಾಡುವ ಪದ್ಧತಿಯೂ ಇದೆ. ಸುಮಾರು ೬ ಕಿ.ಮಿ. ದೂರವಿರುವ ಪರಿಕ್ರಮ ಮಾರ್ಗವನ್ನು ಕ್ರಮಿಸಲು ಒಂದೂವರೆ ಗಂಟೆ ಬೇಕಾಗುತ್ತದೆ. ಪರಿಕ್ರಮದ ಮಾರ್ಗದುದ್ದಕ್ಕೂ ಭಗವದ್ಗೀತೆಯ ಶ್ಲೋಕಗಳುಳ್ಳ ಶಿಲಾಫಲಕಗಳನ್ನು ಸ್ಥಾಪಿಸಿದ್ದಾರೆ. ನರ್ಮದಾ ನದಿಯ ವಿಶೇಷ ಇನ್ನೊಂದಿದೆ. ನದಿಯಲ್ಲಿ ಸಿಕ್ಕಿರುವ ಎಲ್ಲ ಗುಂಡಗಿನ ಕಲ್ಲುಗಳೂ ಬಾಣೇಶ್ವರ ಶಿವನೆಂದೇ ಎಂಬ ನಂಬಿಕೆ ಇದೆ. ಇಲ್ಲಿನ ಒಂದು ಪದ್ಧತಿಯೆಂದರೆ, ಒಬ್ಬರು ಇನ್ನೊಬ್ಬರನ್ನು ಸಂಬೋಧಿಸುವಾಗ 'ನರ್ಮದೇ ಹರ' ಎಂದು ಸಂಬೋಧಿಸುತ್ತಾರೆ.


*ಓಂಕಾರೇಶ್ವರ ಕ್ಷೇತ್ರ*

ಓಂಕಾರೇಶ್ವರ ಕ್ಷೇತ್ರವನ್ನು ೬.೧೨.೨೦೧೩ರ ಮಧ್ಯಾಹ್ನ ತಲುಪಿದೆವು. ಸಂಜೆಯ ಹೊತ್ತಿಗೆ ಜ್ಯೋತಿರ್ಲಿಂಗದ ದರ್ಶನ ಮಾಡಿದೆವು. ಸುಮಾರು ೫ ಗಂಟೆಗೆ ಸಂಗಮಕ್ಕೆ ಹೋಗಿ ಸೂರ್ಯಾಸ್ತವನ್ನು ವೀಕ್ಷಿಸಿದೆವು. ದಿನಾಂಕ ೭.೧೨. ೨೦೧೩ರಂದು ಓಂಕಾರೇಶ್ವರ ಪರಿಕ್ರಮ ಮಾಡಿದೆವು. ದಿನಾಂಕ ೮.೧೨.೨೦೧೩ರಂದು ಪುನಃ ನರ್ಮದಾ ಪರಿಕ್ರಮ ಮಾಡಿ, ಇನ್ನೊಂದು ತೀರದಲ್ಲಿರುವ ಅಮಲೇಶ್ವರ ಶಿವನ ದರ್ಶನ ಮಾಡಿದೆವು. ಮರುದಿನ ಶ್ರೀಶಂಕರಾಚಾರ್ಯರಿಗೆ, ಅವರ ಗುರುಗಳಾದ ಗೋವಿಂದ ಭಗವತ್ಪಾದರು ಸಂನ್ಯಾಸ ದೀಕ್ಷೆಯನ್ನು ನೀಡಿದ ಸ್ಥಳವನ್ನು ನೋಡಿದೆವು. ಅಂದು ಸಂಜೆ ಬಸ್ಸಿನಲ್ಲಿ ಪ್ರಯಾಣ ಮಾಡಿ, ಆಶ್ರಮವನ್ನು ತಲುಪಿದೆವು.

೧೦.೧೨.೨೦೧೩ರಂದು ಇಂದೋರ್ ನಗರದಲ್ಲಿ ಕೆಲವು ಪ್ರೇಕ್ಷಣೀಯ ಸ್ಥಳಗಳನ್ನು ನೋಡಿದೆವು. ಅಂದು ಸಂಜೆ ಪ್ರಯಾಣ ಮಾಡಿ, ೧೧.೧೨.೨೦೧೩ ರಂದು ಬೆಳಗ್ಗೆ ಮುಂಬೈ ತಲುಪಿದೆವು. ಮುಂಬೈ ರಾಮಕೃಷ್ಣ ಆಶ್ರಮ ದಲ್ಲಿ ಉಳಿದುಕೊಂಡು, ಎರಡು ದಿನಗಳ ಕಾಲ ಅಲ್ಲಿನ ಪ್ರೇಕ್ಷಣೀಯ ಸ್ಥಾನಗಳನ್ನು ನೋಡಿಕೊಂಡು ಬಂದೆವು. ಕೊನೆಗೆ ೧೪.೧೨.೨೦೧೩ರಂದು ಮೈಸೂರಿಗೆ ವಾಪಸ್ಸು ಬಂದೆವು.

⌘

# ಯುಗಾದಿಯ ಮಹತ್ವ

ಹಿಂದೂ ವರ್ಷವು ಯುಗಾದಿಯಿಂದ ಆರಂಭವಾಗುವುದು. ಜ್ಯೋತಿಶ್ಶಾಸ್ತ್ರ ಮತ್ತು ಪೌರಾಣಿಕ ದೃಷ್ಟಿಗಳಿಂದ ಈ ಹಬ್ಬದ ಆಧ್ಯಾತ್ಮಿಕ ಮಹತ್ವವನ್ನು ವಿದ್ವತ್ಪೂರ್ಣವಾಗಿ ವಿವರಿಸಿರುವ ಲೇಖಕಿ ಸಂಸ್ಕೃತ ವಿದ್ವಾಂಸರು. ನಿವೃತ್ತ ಕಾಲೇಜು ಪ್ರಾಂಶುಪಾಲರಾದ ಇವರು ರಾಮಕೃಷ್ಣ ಆಶ್ರಮದ ಭಕ್ತರು. ಕೆಲವು ಸಂಸ್ಕೃತ ಗ್ರಂಥಗಳನ್ನು ಅನುವಾದ ಮಾಡಿರುವ ಇವರು ವಿವೇಕಪ್ರಭ ಪತ್ರಿಕೆಯಲ್ಲಿ ಹಲವಾರು ಲೇಖನಗಳನ್ನು ಬರೆದಿದ್ದಾರೆ.

— ಡಾ. ಕೆ.ಎಲ್. ಪ್ರಸನ್ನಾಕ್ಷಿ

ಯುಗಯುಗಾದಿ ಕಳೆದರೂ
ಯುಗಾದಿ ಮರಳಿ ಬರುತಿದೆ
ಹೊಸವರುಷಕೆ ಹೊಸ ಹರುಷವ
ಹೊಸದು ಹೊಸದು ತರುತಿದೆ
ತನ್ನನ್ನಷ್ಟೇ ಮರೆತಿದೆ.

ಯದ್ಯುಜ್ಯತೇಽಸು ಕರ್ಮಮನೋವಚೋಭಿ–
ರ್ದೇಹಾತ್ಮಜಾದಿಷು ನೃಭಿಸ್ತದಸತ್ ಪೃಥಕ್ತ್ವಾತ್ ।
ತೈರೇವ ಸದ್ಭವತಿ ಯತ್ಕ್ರಿಯತೇಽಪೃಥಕ್ತ್ವಾ–
ತ್ಸರ್ವಸ್ಯ ತದ್ಭವತಿ ಮೂಲನಿಷೇಚನಂ ಯತ್ ॥

(*ಭಾಗವತ* : ೮:೧೦:೨೯)

"ಮನುಷ್ಯರು ತಮ್ಮ ಕರ್ಮ, ಮನಸ್ಸು ಮತ್ತು ಮಾತುಗಳ ಮೂಲಕ ತಮಗೆ ಮತ್ತು ತಮ್ಮವರಿಗೆ ಎಂದು ಏನನ್ನೆಲ್ಲ ಮಾಡುತ್ತಾರೋ ಅದು ವ್ಯರ್ಥವೇ ಸರಿ. ಇದಕ್ಕೆ ಬದಲಾಗಿ, ಈ ಎಲ್ಲವನ್ನೂ ಭಗವಂತನಿಗಾಗಿ, ಭಗವತ್ಪ್ರೀತ್ಯರ್ಥವಾಗಿ ಭಗವದ್ಭಾವದಿಂದ ಮಾಡಿದಾಗ ಅವೆಲ್ಲವೂ ಸಾರ್ಥಕವಾಗುತ್ತದೆ."

ಈ ಆಧ್ಯಾತ್ಮಿಕ ಭಾವನೆಯು ಭಾರತದ ಎಲ್ಲ ಭಾಗದ ಜನಮಾನಸದಲ್ಲಿ ಬೇರೂರಿಹೋಗಿದೆ. ಆದ್ದರಿಂದಲೇ ಅವರು ಪ್ರತಿದಿನ ಬೆಳಗ್ಗೆ ಎದ್ದಾಗಿನಿಂದ ರಾತ್ರಿ ಮಲಗುವವರೆಗೂ, ತಮ್ಮ ಎಲ್ಲ ಚಟುವಟಿಕೆಗಳಲ್ಲಿಯೂ ಭಗವಂತನನ್ನೇ ಕಾಣುತ್ತಾರೆ; ತಮ್ಮ ದೈನಂದಿನ ವ್ಯವಹಾರದ ಕೆಲಸಕಾರ್ಯಗಳೆಲ್ಲವನ್ನೂ ಭಗವಂತನಿಗೇ ಅರ್ಪಿಸುತ್ತಾರೆ. ಅದರಲ್ಲೂ ಭಗವದ್ಭಾವದ ಅಭಿವ್ಯಕ್ತಿಯು ಹೆಚ್ಚು ಪ್ರಕರ್ಷಮಾನವಾಗಿ ಇರುವ ವಿಶಿಷ್ಟ ದಿನಗಳನ್ನು 'ಹಬ್ಬಗಳು' ಎಂದು ನಮ್ಮ ಹಿರಿಯರು ಕರೆದರು. ಆ ದಿನಗಳಲ್ಲಿ ಮನಸ್ಸು ಬುದ್ಧಿ ಇಂದ್ರಿಯ ಮೊದಲಾದವನ್ನು ಭಗವಂತನಿಗೆ ಪೂರ್ಣವಾಗಿ ಸಮರ್ಪಣ ಮಾಡಿಕೊಳ್ಳಬೇಕು. ಹಾಗೆ ಮಾಡಿದರೆ, ಹಬ್ಬ ಅಥವಾ ಉತ್ಸವಗಳ ಆಚರಣೆಯು ಆತ್ಯಂತಿಕ ಶ್ರೇಯಸ್ಸನ್ನು ತಂದುಕೊಡುತ್ತದೆ. ಇತರ ದಿನಗಳಲ್ಲಿ ಉದಾಸೀನ ಮಾಡಬಹುದೇನೋ. ಆದರೆ, ಲೋಕೋದ್ಧಾರಕ್ಕೆ ದ್ವಾರವಾದ ಇಂಥ ವಿಶೇಷ ದಿನಗಳಲ್ಲಿ ಜನರು ಹೆಚ್ಚು ಎಚ್ಚರದಿಂದಿರಬೇಕು. ಪರಮಕರುಣಾಳುವಾದ ಭಗವಂತನು ಇಂಥ ಪಾವನ ದಿನಗಳಲ್ಲಿ ಅಪಾರವಾದ ಅನುಗ್ರಹವನ್ನು ಹರಿಸುತ್ತಾನೆ. ಇದನ್ನು ಪಡೆದುಕೊಂಡು ಧನ್ಯರಾಗಬೇಕು. ಇದೇ ಜ್ಞಾನಿಗಳಾದ ಅನುಭವಿಗಳ ಅಭಿಪ್ರಾಯ. ಇಂಥ ಪರ್ವದಿನಗಳಲ್ಲಿ 'ಯುಗಾದಿ' ಹಬ್ಬ ವರ್ಷದ ಆರಂಭದಲ್ಲಿ ಬರುತ್ತದೆ.

'ಯುಗಾದಿ' ಎಂದರೆ ಯುಗದ ಆದಿ. ಬ್ರಹ್ಮಪುರಾಣ ಹೀಗೆ ಹೇಳುತ್ತದೆ: **ಚೈತ್ರೇ ಮಾಸಿ ಜಗದ್ ಬ್ರಹ್ಮ ಸಸರ್ಜ ಪ್ರಥಮೇಽಹನಿ** ಎಂದರೆ ಚೈತ್ರಮಾಸದ ಮೊದಲನೆಯ ದಿನದಂದು ಬ್ರಹ್ಮನು ಈ ಜಗತ್ತನ್ನು ಸೃಷ್ಟಿಸಿದನು. ಬ್ರಹ್ಮನು ತನ್ನ ಸಂಕಲ್ಪಮಾತ್ರದಿಂದ ಈ ಜಗತ್ತನ್ನು ಸೃಷ್ಟಿಸಿದನು ಎಂದು ಪುರಾಣಗಳು ಹೇಳುತ್ತವೆ. ಇಂಥ ಸಂಕಲ್ಪವೇ ಅವನ ಶಕ್ತಿಯನ್ನು ಬಾಹ್ಯಮುಖವನ್ನಾಗಿ ಮಾಡಿತು. ಇದರಿಂದ ಮೊದಲು ಒಂದೇ ಇದ್ದದ್ದು 'ಎರಡು' ಅಥವಾ 'ಯುಗ' ಆಯಿತು. ಯುಗ ಎಂದರೆ ಎರಡು ಅಥವಾ ಜೋಡಿ ಎಂದರ್ಥ. ಹೀಗೆ ಸೃಷ್ಟಿಯ ಆದಿಯ ದಿನವನ್ನು 'ಯುಗಾದಿ' ಎಂದು ಕರೆಯುತ್ತಾರೆ.

ಮುಂದೆ, ನಾವೀಗ ಕಂಡು ಪರಿಭಾವಿಸುವ, ಇಷ್ಟು ದೊಡ್ಡದಾಗಿ ಬೆಳೆದ ಬ್ರಹ್ಮಾಂಡವು ಕ್ರಮೇಣ ವ್ಯಕ್ತವಾಗುತ್ತ ಹೋಯಿತು. ಜಗತ್ತು ರಚನೆಯಾಯಿತು. ಸಮಾಜದ ಅಭಿವೃದ್ಧಿ ಕಾಣಿಸಿಕೊಂಡಿತು. ಇದರಲ್ಲಿ ಅನೇಕ 'ಯುಗ' (ಜೋಡಿ) ಗಳಿವೆ. ಅವುಗಳಲ್ಲಿ ಕೆಲವು ಹೀಗಿವೆ: ಸುಖ–ದುಃಖ, ಲಾಭ–ನಷ್ಟ,

ಜಯ–ಅಪಜಯ, ಕೀರ್ತಿ–ಅಪಕೀರ್ತಿ, ಮಾನ–ಅಪಮಾನ, ಪಾಪ–ಪುಣ್ಯ ಮುಂತಾದವು. ಈ ಎಲ್ಲ ಯುಗಗಳಿಗೆ ಮೂಲವಾದ ಅಥವಾ ಆದಿಯಾದ ದಿನವೇ ಯುಗಾದಿ. ಸೃಷ್ಟಿಗೊಂಡ ಜೀವಿಗಳು ತಮ್ಮ ಬಲ ಅಥವಾ ಶಕ್ತಿಯನ್ನು ಗಳಿಸಿಕೊಳ್ಳುವುದು ಅನ್ನದಿಂದ. ಅನ್ನವು 'ಓಷಧಿ'ಯಿಂದ, ಅಂದರೆ ಗಿಡಮೂಲಿಕೆಗಳಿಂದ ಬಲಗೊಳ್ಳುತ್ತದೆ. ಈ ಓಷಧಿಗಳಿಗೆ ಚಂದ್ರನೇ ಅಧಿಪತಿ. ಯುಗಾದಿಯ ದಿನ ಚಂದ್ರನು ವೃದ್ಧಿಹೊಂದಲು ಮೊದಲುಮಾಡುವ ದಿನ ಕೂಡ. ಹಾಗೆಯೇ ಇಡೀ ಲೋಕ ಶಕ್ತಿ–ಯುಕ್ತಿ–ಬಲ–ಆಯುಸ್ಸು–ಆರೋಗ್ಯಗಳನ್ನು ಸಂಪಾದಿಸಿಕೊಂಡು, ಅಭಿವೃದ್ಧಿಯೆಡೆಗೆ ಸಾಗಲು ಹೆಜ್ಜೆಯಿಡಬೇಕಾದ ದಿನವೂ ಆಗಿದೆ.

ಹೇಮಂತ ಮತ್ತು ಶಿಶಿರ ಮಾಸಗಳಲ್ಲಿ ವಾತಾವರಣ ತಂಪಾಗಿರುತ್ತದೆ. ವಸಂತಕಾಲದಲ್ಲಿ ಉಷ್ಣತೆ ಹೆಚ್ಚಾಗುತ್ತ ಹೋಗುತ್ತದೆ. ನಿಸರ್ಗದಲ್ಲಿ ಹೊಸ ಚೈತನ್ಯ ಮೂಡುತ್ತದೆ. ಹಳೆಯದೆಲ್ಲ ಉದುರಿಹೋಗುತ್ತದೆ. ಹೊಸ ಚಿಗುರು ಮೂಡುತ್ತದೆ. ಇದರಂತೆಯೇ, ನಮ್ಮ ಶ್ರೇಯಸ್ಸಿಗೆ ಅಡ್ಡಿಮಾಡುವ ವಿಷಯಗಳನ್ನು ನಾವು ಬಿಟ್ಟುಬಿಡಬೇಕು. ಹೊಸ ಹುರುಪಿನಿಂದ ಧ್ಯೇಯದೆಡೆಗೆ ಸಾಗಬೇಕು. ಇದಕ್ಕೆ ಸ್ಫೂರ್ತಿ ನೀಡುವ ಕಾಲವೇ ಯುಗಾದಿ.

ಪೌರಾಣಿಕವಾಗಿಯೂ ಯುಗಾದಿ ಮಹತ್ವದ ದಿನ. ಮಧುಕೈಟಭರೆಂಬ ದಾನವರು ವೇದವನ್ನು ಅಪಹರಿಸಿ ಬಚ್ಚಿಟ್ಟಿದ್ದರು. ವೇದವು ಜ್ಞಾನವನ್ನು ಸಂಕೇತಿಸುತ್ತದೆ. ಆಗ ಜ್ಞಾನದ ಬೆಳಕಿಲ್ಲದೆ ಇಡೀ ಜಗತ್ತೇ ತತ್ತರಿಸಿತು. ವೇದಗಳನ್ನು ಹೀಗೆ ಬಚ್ಚಿಟ್ಟಾಗ, ಭಗವಂತನು ಮತ್ಸ್ಯ ಅಥವಾ ಮೀನಿನ ರೂಪವನ್ನು ತಾಳಿದನು. ಮಧು–ಕೈಟಭರು ಬಚ್ಚಿಟ್ಟಿದ್ದ ವೇದರಾಶಿಯನ್ನು ಸಮುದ್ರದಾಳದಿಂದ ಮೇಲಕ್ಕೆ ತಂದನು. ಈ ರೀತಿ ಲೋಕಕ್ಕೆ ಬೆಳಕನ್ನು ಕೊಟ್ಟು, ಜಗತ್ತಿನ ವ್ಯವಹಾರವು ಮತ್ತೆ ಮೊದಲಿನಂತೆ ಸಾಗುವಂತೆ ಮಾಡಿದ ದಿನವೂ 'ಯುಗಾದಿ' ಎಂದು ಪುರಾಣಗಳು ಸಾರುತ್ತವೆ. ಹಾಗೆಯೇ, ಶ್ರೀರಾಮನು ವನವಾಸದಿಂದ ಹಿಂತಿರುಗಿದಾಗ, ಅಯೋಧ್ಯೆಯ ಜನರು ಆ ಮರ್ಯಾದಾ ಪುರುಷೋತ್ತಮನ ಗುಣ, ಪರಾಕ್ರಮಗಳನ್ನು ಕೊಂಡಾಡುತ್ತ ಸಂಭ್ರಮದಿಂದ ನಲಿದ ದಿನವೂ ಇದೇ.

ಒಟ್ಟಿನಲ್ಲಿ ಭಗವಂತನ ಸಂಕಲ್ಪ ವಿಕಾಸಗೊಂಡು, ಕೃತ, ತ್ರೇತಾ, ದ್ವಾಪರ, ಕಲಿ ಮುಂತಾದ 'ಯುಗ'ಗಳು ಆರಂಭವಾದ ದಿನವೇ 'ಯುಗಾದಿ'. ಈಗ ಇದರ ಸಾಂಪ್ರದಾಯಿಕ ಆಚರಣೆಯ ವಿಧಾನವನ್ನು ನೋಡೋಣ: ಅವತ್ತು ಸೂರ್ಯೋದಯಕ್ಕೆ ಮೊದಲೇ ಎಣ್ಣೆಸ್ನಾನ ಮಾಡಬೇಕು. ಅನಂತರ ದೇವರ ಪೂಜೆ ಮಾಡಬೇಕು. ದೇವರಿಗೆ ಅಂದು ವಿಶೇಷವಾಗಿ ಬೇವು–ಬೆಲ್ಲವನ್ನು ಸಮರ್ಪಣೆ ಮಾಡಬೇಕು. ನಂತರ ಈ ಕೆಳಗಿನ ಶ್ಲೋಕವನ್ನು ಹೇಳುತ್ತ ಪ್ರಸಾದವನ್ನು ಸೇವಿಸಬೇಕು:

**ಶತಾಯುರ್ವಜ್ರದೇಹಾಯ ಸರ್ವಸಂಪತ್ಕರಾಯ ಚ ।**
**ಸರ್ವಾರಿಷ್ಟವಿನಾಶಾಯ ನಿಂಬಕಂ ದಲಭಕ್ಷಣಮ್ ॥**

"ನೂರು ವರ್ಷಗಳ ಕಾಲ, ವಜ್ರದಂತೆ ದೃಢ ದೇಹಧಾರಿಯಾಗಿರಲು, ಎಲ್ಲ ರೀತಿಯ ಸಂಪತ್ತಿಗಾಗಿ, ಎಲ್ಲ ವಿಪತ್ತುಗಳ ನಿವಾರಣೆಗಾಗಿ ಬೇವಿನ ಎಲೆಯನ್ನು ಸೇವಿಸಬೇಕು."

ಜೀವನದಲ್ಲಿ ಸಿಹಿ–ಕಹಿ, ಬಿಸಿ–ತಂಪು, ಸುಖ–ದುಃಖ ಎಲ್ಲವೂ ಇದ್ದೇ ಇರುತ್ತವೆ. ಇದಾವುದೂ ಸ್ಥಿರವಲ್ಲ. ಅವೆಲ್ಲವೂ ಒಂದಾದಮೇಲೊಂದು ಬಂದುಹೋಗುತ್ತಲೇ ಇರುತ್ತವೆ. ಶ್ರೀಕೃಷ್ಣನು **'ತಾಂಸ್ತಿತಿಕ್ಷಸ್ವ ಭಾರತ'** – 'ಅವುಗಳನ್ನೆಲ್ಲ ಸಹಿಸಿಕೊಳ್ಳಬೇಕು' ಎಂದು ಭಗವದ್ಗೀತೆಯಲ್ಲಿ ಆದೇಶವಿತ್ತಿದ್ದಾನೆ. ಯುಗಾದಿಯ ದಿವಸ ನಾವು ತಿನ್ನುವ ಬೇವು–ಬೆಲ್ಲ ಇದನ್ನು ಸಂಕೇತಿಸುತ್ತದೆ. ಇದನ್ನು ತಿಂದಾಗ, ಬೆಲ್ಲದ ಸಿಹಿರುಚಿ ಬೇಗ ಸರಿದುಹೋಗುತ್ತದೆ. ಬೇವಿನ ಕಹಿರುಚಿ ಬಹಳ ಕಾಲ ಉಳಿಯುತ್ತದೆ. ಜೀವನದಲ್ಲೂ ಇದೇ ಬಗೆಯನ್ನು ಕಾಣಬಹುದು. ಬಾಳಿನಲ್ಲಿ ಸುಖವನ್ನು ಅನುಭವಿಸುತ್ತೇವೆ. ದುಃಖವನ್ನೂ ಅನುಭವಿಸುತ್ತೇವೆ. ಇಷ್ಟಾದರೂ, ನಾವು ಅನುಭವಿಸಿದ ಅಲ್ಪಸ್ವಲ್ಪ ಕಷ್ಟವನ್ನೇ ನೆನೆದು ನೆನೆದು ದುಃಖಪಡುತ್ತೇವೆ. ಇದರಿಂದ ನಮ್ಮ ಸುಖಕಾಲವನ್ನೂ ಸಂಕಟಮಯವನ್ನಾಗಿ ಮಾಡಿಕೊಳ್ಳುತ್ತೇವೆ. ಹಾಗೆ ಆಗಬಾರದಷ್ಟೇ. ಅದಕ್ಕಾಗಿ ಸುಖದುಃಖಗಳೆರಡನ್ನೂ ಸಹಜವಾಗಿ ಸ್ವೀಕರಿಸಬೇಕು. ಈ ಅಂಶವನ್ನು 'ಯುಗಾದಿ' ನೆನಪಿಗೆ ತಂದುಕೊಡುತ್ತದೆ. ಈ ಮೂಲಕ, 'ಸತ್ಯಧರ್ಮಯುಕ್ತವಾದ ಬಾಳನ್ನು ನಡೆಸಲು ಸೂಕ್ತವಾದ ಯೋಜನೆ ಹಾಕಿಕೊಂಡು, ಅದರಂತೆ ನಡೆಯಬೇಕು' ಎಂಬುದನ್ನು ನಮಗೆ ನೆನಪು ಮಾಡಿಕೊಡುತ್ತದೆ.

ಬೇರೆಲ್ಲ ಹಬ್ಬ ವ್ರತ ನೇಮಗಳಲ್ಲಿರುವಂತೆ ಈ ಹಬ್ಬದ ಆಚರಣೆಯಲ್ಲಿಯೂ 'ದಾನ'ವೆನ್ನುವುದು ಒಂದು ವಿಶಿಷ್ಟ ಅಂಗವಾಗಿದೆ. ಅವತ್ತಿನಿಂದ ಬಿಸಿಲು ಹೆಚ್ಚುತ್ತ ಹೋಗುತ್ತದೆ. ಆದ್ದರಿಂದ ಜಲಪಾತ್ರೆಯನ್ನು ದಾನಮಾಡಬೇಕು ಎಂಬ ಸಂಪ್ರದಾಯವಿದೆ. ಇದಲ್ಲದೆ, ನಮ್ಮ ಅನುಕೂಲಕ್ಕೆ ತಕ್ಕಂತೆ, ನಮ್ಮಲ್ಲಿರುವ ಯಾವುದೇ ಉತ್ತಮವಸ್ತುವನ್ನಾಗಲಿ, ವಸ್ತ್ರಭೂಷಣಗಳನ್ನಾಗಲಿ ದಾನ ಮಾಡಬೇಕು. ಇಂಥ ದಾನಕ್ರಿಯೆ ಯಾವುದೇ ಭೇದಭಾವವಿಲ್ಲದೆ ಎಲ್ಲ ಜೀವಿಗಳಲ್ಲಿಯೂ ಸಮಾನವಾಗಿ ನೆಲೆಸಿರುವ ಭಗವಂತನಿಗೆ ಮಾಡಿದ ಪೂಜೆಯಾಗುತ್ತದೆ.

ಯುಗಾದಿಯ ದಿನ ಸಂಜೆಯ ಕಾಲ ದೀಪ ಹಚ್ಚಬೇಕು. ಅನಂತರ ಪಂಚಾಂಗ ಶ್ರವಣ ಮಾಡಬೇಕು. ಪಂಚಾಂಗವು ಸಂವತ್ಸರ, ಅದರ ಅಧಿಪತಿ, ಆವನ ಸಂಚಾರ ಮುಂತಾದವುಗಳನ್ನು ತಿಳಿಸುತ್ತದೆ. ಇಡೀ ವರ್ಷಕ್ಕೆ ಯೋಜನೆ ಮಾಡಿಕೊಂಡು, ಅದರಂತೆ ನಡೆಯಬೇಕು ಎನ್ನುವುದನ್ನು ಇದು ಸೂಚಿಸುತ್ತದೆ.

ಈ ವರ್ಷ 'ವಿಜಯ' ಸಂವತ್ಸರವು ಕಳೆದು, ಮುಂದೆ 'ಜಯ' ಸಂವತ್ಸರ ಬರುತ್ತಿದೆ. ಈ ಸಂವತ್ಸರಕ್ಕೆ ಚಂದ್ರನೇ ಅಧಿಪತಿ. ಈ ವರ್ಷದಲ್ಲಿ ಭಗವಂತನು ಸತ್ಸಂಕಲ್ಪ ಮತ್ತು ಧರ್ಮನಿಷ್ಠೆಗಳನ್ನು ದೃಢಪಡಿಸಲಿ; ಈ 'ಜಯ' ಸಂವತ್ಸರದಲ್ಲಿ ಭಗವಂತನು ನಮ್ಮನ್ನು ನಿಜವಾದ 'ಜಯ' ಅಂದರೆ ಆಧ್ಯಾತ್ಮಿಕ ಜಯದತ್ತ ಕೊಂಡೊಯ್ಯಲಿ. ಮಹಾಭಾರತಕ್ಕೆ 'ಜಯ' ಎಂಬ ಇನ್ನೊಂದು ಹೆಸರು ಇದೆ. ನಮ್ಮ ಇಡೀ ಜೀವನವೇ ಮಹಾಭಾರತ ಯುದ್ಧ. ಈ ಜಗತ್ತೇ ಕುರುಕ್ಷೇತ್ರ. ಕುರುಕ್ಷೇತ್ರವು ಧರ್ಮಕ್ಷೇತ್ರವೆಂದು ಪ್ರಸಿದ್ಧವಾಗಿದೆ. ಮಹಾಭಾರತ ಯುದ್ಧ ಧರ್ಮಯುದ್ಧವೆಂದು ಖ್ಯಾತವಾಗಿದೆ. ಈ ಜಗತ್ತೆಂಬ ಧರ್ಮಕ್ಷೇತ್ರದಲ್ಲಿ, ನಾವು ಧರ್ಮಯುದ್ಧವನ್ನು ಸತತವಾಗಿ ಮಾಡುತ್ತಲೇ ಇರಬೇಕು. ಆಮೂಲಕ ಅಧರ್ಮದ ವಿರುದ್ಧ 'ಜಯ'ವನ್ನು ಸಾಧಿಸಬೇಕು. ಮುಂಬರುವ 'ಜಯ' ಸಂವತ್ಸರದಲ್ಲಿ ಇದೇ ನಮ್ಮ ಧ್ಯೇಯವಾಗಲಿ. ⌘

# ಕರ್ನಾಟಕದ ಹರಿದಾಸ ಪರಂಪರೆ

ಕೆ. ಶಾರದಾಬಾಯಿ

ಕರ್ನಾಟಕದ ಭಕ್ತಿಪಂಥಗಳಲ್ಲಿ ಹರಿದಾಸರ ಪರಂಪರೆಯೂ ಒಂದು. ಭಕ್ತಿಸ್ರೋತವನ್ನು ನಾಡಿನಾದ್ಯಂತ ಹರಡಿದ ಈ ಪುಣ್ಯಗಾಥೆಯನ್ನು ಪರಿಚಯ ಮಾಡಿಕೊಟ್ಟಿರುವ ಲೇಖಕಿ ಶಿವಮೊಗ್ಗ ನಗರದ ನಿವಾಸಿ. ಇವರು ದಾಸಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದ್ದಾರೆ.

ಹರಿದಾಸರು ವಿಷ್ಣುವಿನ ಪರಮ ಭಕ್ತರು. ಹದಿನೈದನೇ ಶತಮಾನದಲ್ಲಿ ಭಕ್ತಿಯುತವಾದ ಮತ್ತು ಪಾಂಡಿತ್ಯಪೂರ್ಣವಾದ ಸಾಹಿತ್ಯರಚನೆಯಲ್ಲಿ ತೊಡಗುವುದರ ಮೂಲಕ ಅವರು ಅಂದಿನ ಕಾಲದ ಸಾಹಿತ್ಯಲೋಕವನ್ನು ಬೆರಗುಗೊಳಿಸಿದರು. ಕನ್ನಡದಲ್ಲಿ ಹರಿದಾಸ ಸಾಹಿತ್ಯದ ಮೂಲ ಪ್ರೇರಣೆ ನೀಡಿದವರು ಶ್ರೀಮಧ್ವಾಚಾರ್ಯರು. ಅವರ ದ್ವಾದಶಸ್ತೋತ್ರವು ದಾಸಕೂಟದ ಉದಯಕ್ಕೆ ಕಾರಣವಾಯಿತೆಂದರೆ ತಪ್ಪಾಗಲಾರದು.

೧೩ನೇ ಶತಮಾನದಲ್ಲಿ ಮಧ್ವಾಚಾರ್ಯರ ನೇರ ಶಿಷ್ಯರೇ ಆದ ನರಹರಿತೀರ್ಥರು ನಾಲ್ಕಾರು ಕನ್ನಡಕೃತಿಗಳನ್ನು ರಚಿಸಿ ಹರಿದಾಸ ಸಾಹಿತ್ಯದ ಮೂಲಪುರುಷರೆನಿಸಿಕೊಂಡರು. (ಉದಾಹರಣೆ: ಎಂತು ಮರುಳಾದೆ) ಅವರ ಅಂಕಿತ **ನರಹರಿ** ಎಂದಾಗಿತ್ತು. ಆದರೂ ಸಂಪ್ರದಾಯವು ಶ್ರೀಪಾದರಾಜರನ್ನೇ ದಾಸಸಾಹಿತ್ಯದ ಆದ್ಯಪ್ರವರ್ತಕರಾಗಿ ಗುರುತಿಸುತ್ತದೆ. ಈ ಶ್ಲೋಕವು ಇದನ್ನು ಸ್ಪಷ್ಟಪಡಿಸುತ್ತದೆ:

**ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ ।**
**ನಮಃ ಪುರಂದರಾರ್ಯಾಯ ವಿಜಯರಾಜಾಯ ತೇ ನಮಃ ॥**



೧. **ಶ್ರೀಪಾದರಾಜರು** (ಕ್ರಿ.ಶ. ೧೪೦೪ – ೧೫೦೨) ದಾಸ ಸಾಹಿತ್ಯ ಪರಂಪರೆಗೆ ಮಾರ್ಗ ದರ್ಶಕರು. ಶ್ರೀಮಧ್ವಾಚಾರ್ಯರ ಪ್ರಥಮ ಶಿಷ್ಯರಾದ ಶ್ರೀಪದ್ಮನಾಭತೀರ್ಥರ ಸಂಸ್ಥಾನದ ಪರಂಪರೆಗೆ ಸೇರಿದವರು. ಶ್ರೀರಂಗದಲ್ಲಿ ನೆಲಸಿ "ರಂಗವಿಠಲ" ಅಂಕಿತದಲ್ಲಿ ಭ್ರಮರಗೀತೆ, ವೇಣುಗೀತೆ, ಗೋಪಿಗೀತೆ ಮುಂತಾದವುಗಳನ್ನು ರಚಿಸುವ ಮೂಲಕ ದಾಸಸಾಹಿತ್ಯಕ್ಕೆ ಭದ್ರವಾದ ಬುನಾದಿಯನ್ನು ಹಾಕಿದರು. **'ಕಂಗಳಿನ್ಯಾತಕೋ ಕಾವೇರಿರಂಗನ ನೋಡದ', 'ರಂಗನಾಥನ ನೋಡುವ ಬನ್ನಿ, ಶ್ರೀರಂಗನ, ದಿವ್ಯ ವಿಮಾನದಲ್ಲಿಹನ'** ಎಂದು ಶ್ರೀರಂಗನನ್ನು ನೆನೆಯುವ ಅನೇಕ ಗೀತೆಗಳನ್ನು ಅವರು ರಚಿಸಿದ್ದಾರೆ. ಈ ಮೂಲಕ ಅವರು ದಾಸಸಾಹಿತ್ಯಕ್ಕೆ ದಾರಿದೀಪವಾಗಿದ್ದಾರೆ.

೨. ಶ್ರೀಪಾದರಾಜರ ಶಿಷ್ಯರಲ್ಲಿ ಪ್ರಮುಖರಾದವರು **ವ್ಯಾಸರಾಯರು** (೧೪೪೭ – ೧೫೩೯). ಇವರು ವಿಜಯನಗರದ ಅರಸರ ಗೌರವಕ್ಕೆ ಪಾತ್ರರಾಗಿ ಶ್ರೀ ಕೃಷ್ಣದೇವ



ರಾಯನ ರಾಜಗುರುಗಳೆನಿಸಿದರು. ಇವರು ಕನ್ನಡ ಮತ್ತು ಸಂಸ್ಕೃತ ಎರಡು ಭಾಷೆಗಳಲ್ಲೂ ಪಾಂಡಿತ್ಯ ಪಡೆದವರು. "ಶ್ರೀಕೃಷ್ಣ" ಎಂಬ ಅಂಕಿತದಲ್ಲಿ ಕನ್ನಡದಲ್ಲಿ ಸುಳಾದಿ, ಕೀರ್ತನೆ, ಉಗಾಭೋಗಗಳನ್ನು ರಚಿಸಿ ದಾಸಸಾಹಿತ್ಯದಲ್ಲಿ ಬಹಳಷ್ಟು ಕಾರ್ಯವೆಸಗಿದ ಮಹಾತ್ಮರಿವರು. **'ಆಳಿದ ನೀನು ನಿನ್ನಾಳು ನಾನು', 'ತಂದೆ ನೀನು ನಿನ್ನ ಕಂದ ನಾನು', 'ಶ್ರೀಕೃಷ್ಣ ಎನ್ನ ಕಾಯಬೇಕೈ ತಂದೆ'** ಎಂದು ಶ್ರೀಕೃಷ್ಣನನ್ನು ಬಗೆಬಗೆಯಾಗಿ ಇವರು ಸ್ತುತಿಸಿದರು. ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನಸಾಹಿತ್ಯಕ್ಕೆ ಒಂದು ವ್ಯವಸ್ಥಿತವಾದ ರೂಪವನ್ನು ತಂದುಕೊಟ್ಟವರು ಶ್ರೀವ್ಯಾಸರಾಯರು.



೩. **ವಾದಿರಾಜರು :** ಶ್ರೀಪಾದರಾಜರಿಂದ ಪ್ರಾರಂಭವಾದ ದಾಸಸಾಹಿತ್ಯವು ವ್ಯಾಸರಾಯರು ಮತ್ತು ವಾದಿರಾಜರಿಂದ (೧೪೮೦–೧೬೦೦) ಮುಂದುವರಿದು ಶಾಖೋಪಶಾಖೆಗಳಾಗಿ ಬೆಳೆಯಿತು. ಬಾಲಕನಾದ ಭೂವರನಿಗೆ ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಸ್ವಾದಿ ಮಠದ ವಾಗೀಶತೀರ್ಥ ಯತಿಗಳು ಬಾಲ್ಯದಲ್ಲಿಯೇ ಸಂನ್ಯಾಸ ದೀಕ್ಷೆಯನ್ನು ಕೊಟ್ಟು ವಾದಿರಾಜರೆಂಬ ಆಶ್ರಮನಾಮವನ್ನು ಕೊಟ್ಟರು. ಇವರು ವ್ಯಾಸರಾಯರಂತೆ ದಾಸಸಾಹಿತ್ಯದಲ್ಲಿ ಅಪಾರವಾದ ಕೃಷಿಯನ್ನು ಮಾಡಿದ್ದಾರೆ. ಸಂಸ್ಕೃತದಲ್ಲಿ ಹಲವಾರು ಗ್ರಂಥಗಳನ್ನು ರಚಿಸಿರುವುದಲ್ಲದೆ, ಕನ್ನಡದಲ್ಲಿ **'ವೈಕುಂಠ ವರ್ಣನೆ', 'ಸ್ವಪ್ನ ಗದ್ಯ', 'ಲಕ್ಷ್ಮೀ ಶೋಭಾನೆ'** ಎಂಬ ಗ್ರಂಥಗಳನ್ನೂ, ಅನೇಕ ಕೀರ್ತನೆ, ಸುಳಾದಿ, ಉಗಾಭೋಗಗಳನ್ನೂ ರಚಿಸಿದ್ದಾರೆ.



೪. **ಪುರಂದರದಾಸರು** (೧೪೮೪–೧೫೬೪) ವ್ಯಾಸರಾಯರ ಶಿಷ್ಯರಲ್ಲಿ ಪ್ರಮುಖರಾದವರು. ತಮ್ಮ ಗುರುಗಳಾದ ಶ್ರೀ ವ್ಯಾಸರಾಯರಿಂದ 'ದಾಸರೆಂದರೆ ಪುರಂದರದಾಸರಯ್ಯ' ಎಂದು ಹೊಗಳಿಕೆಗೆ ಪಾತ್ರರಾದವರು. 'ಪುರಂದರ ವಿಠಲ' ಎಂಬ ಅಂಕಿತದಲ್ಲಿ ಸಾವಿರಾರು ಕೀರ್ತನೆಗಳು ಮತ್ತು ಉಗಾಭೋಗಗಳನ್ನು ರಚಿಸಿ ದಾಸಸಾಹಿತ್ಯದ ಹಿರಿಮೆಯನ್ನು ಹೆಚ್ಚಿಸಿದರು. ಕಠಿಣವೆನಿಸಿದ ವೇದ ಉಪನಿಷತ್ತು, ರಾಮಾಯಣ, ಮಹಾಭಾರತಗಳು ಸಾಮಾನ್ಯ ಜನರಿಗೂ ತಲುಪುವಂತೆ ಮಾಡಿದರು. ಸಂಗೀತ ಅಭ್ಯಾಸ ಶಿಕ್ಷಣದ ಕ್ರಮವನ್ನು ಸುಧಾರಣೆ ಮಾಡಿ **'ಕರ್ನಾಟಕ ಸಂಗೀತ ಪಿತಾಮಹ'** ಎನಿಸಿಕೊಂಡರು.

೫. **ಕನಕದಾಸರು** (೧೫೦೮–೧೬೦೬) ವ್ಯಾಸರಾಯರ ಶಿಷ್ಯರಲ್ಲಿ ಮತ್ತೊಬ್ಬ ಪ್ರಮುಖರು. ಇವರು ಪುರಂದರದಾಸರ ಸಮಕಾಲೀನರು; ದಾಸಸಾಹಿತ್ಯದಲ್ಲಿ ಅಗ್ರಗಣ್ಯರು; ಅನುಪಮ ಕೀರ್ತನಕಾರರು. ಅಷ್ಟಲ್ಲದೆ ಶ್ರೇಷ್ಠಕವಿಗಳೂ ಹೌದು. ಇವರು 'ಆದಿ ಕೇಶವ' ಮತ್ತು 'ಕಾಗಿನೆಲೆಯಾದಿ ಕೇಶವ' ಅಂಕಿತಗಳಲ್ಲಿ ಕೀರ್ತನೆಗಳನ್ನು ರಚಿಸಿದರು. **'ಕುಲಕುಲವೆಂದು ಹೊಡೆದಾಡದಿರಿ', 'ತಲ್ಲಣಿಸದಿರು ಕಂಡ್ಯ ತಾಳು ಮನವೆ', 'ತನು ನಿನ್ನದು ಜೀವನ ನಿನ್ನದು'** ಮುಂತಾದವು ಇವರ ಕೆಲವು ಪ್ರಸಿದ್ಧ ಕೀರ್ತನೆಗಳು. **'ಹರಿಭಕ್ತಿಸಾರ', 'ರಾಮಧಾನ್ಯ ಚರಿತ್ರೆ', 'ಮೋಹನ ತರಂಗಿಣಿ'** ಮತ್ತು **'ನೃಸಿಂಹಸ್ತವ'** ಇವರ ಕಾವ್ಯಕೃತಿಗಳು.



ದಾಸಸಾಹಿತ್ಯದ ಚರಿತ್ರೆಯನ್ನು ಅವಲೋಕಿಸಿದಾಗ ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರು ಇವರು ದಾಸಸಾಹಿತ್ಯಕ್ಕೆ ಭದ್ರವಾದ ಬುನಾದಿಯನ್ನು ಹಾಕಿಕೊಟ್ಟಿರುವುದು ಕಂಡುಬರುತ್ತದೆ. ಆಮೇಲೆ ಬಂದ ಪುರಂದರದಾಸರು, ಕನಕದಾಸರು ಮತ್ತು ವಿಜಯದಾಸರು ಅದರ ಕಳಶಪ್ರಾಯರೆನಿಸಿದ್ದಾರೆ. ನಂತರ ಬಂದವರಲ್ಲಿ, ಪ್ರಸನ್ನವೆಂಕಟದಾಸರು, ಮಹಿಪತಿದಾಸರು, ರಾಘವೇಂದ್ರತೀರ್ಥರು ಈ ಪುಣ್ಯಪರಂಪರೆಯನ್ನು ಮುಂದುವರಿಸಿ ಕೊಂಡುಹೋದರು.



೬. **ವಿಜಯದಾಸರು** : ವಿಜಯನಗರದ ಪತನದ ನಂತರ ಹರಿದಾಸ ಸಾಹಿತ್ಯ ಒಂದು ಶತಮಾನದ ಕಾಲ ಗುಪ್ತಗಾಮಿನಿಯಾಗಿದ್ದು, ವಿಜಯದಾಸರ ಕಾಲದಲ್ಲಿ ಪುನಃ ವಿಜೃಂಭಿಸಲಾರಂಭಿಸಿತು. ಭೃಗುಮುನಿಗಳ ಅಂಶಸಂಭೂತರೆಂದು ಪ್ರಸಿದ್ಧರಾದ ವಿಜಯದಾಸರು ೨೫,೦೦೦ ಕೃತಿಗಳನ್ನು ರಚಿಸಿದ್ದಾರೆ ಎಂಬ ಪ್ರತೀತಿಯಿದ್ದು, ನಮಗೆ ದೊರಕಿರುವುದು ಕೆಲವು ಮಾತ್ರ. ಇವರು ತಮ್ಮ ಸುಳಾದಿಗಳಲ್ಲಿ ಗಹನ ತತ್ತ್ವಗಳಿಗೆ ಪ್ರಾಧಾನ್ಯತೆಯನ್ನು ಕೊಟ್ಟಿದ್ದಾರೆ. ತಮ್ಮ ಕೀರ್ತನೆಗಳಲ್ಲಿ ಹರಿಭಕ್ತಿ, ನವರಸಭಕ್ತಿ ಮತ್ತು ಪಂಚಭಾವಗಳನ್ನು ಉದಾಹರಣೆಗಳ ಮೂಲಕ ವಿವರಿಸಿದ್ದಾರೆ. ಆಮೂಲಕ ಧೈರ್ಯ, ಸ್ಥೈರ್ಯ ಮತ್ತು ಆತ್ಮೋನ್ನತಿಯ ಮಾರ್ಗಗಳನ್ನು ಜನರಿಗೆ ರೂಪಿಸಿಕೊಟ್ಟರು. ಬಡ ಕೂಸಮ್ಮನ ಮಗನಾಗಿದ್ದ ದಾಸಪ್ಪನು ವ್ಯಾಸಕಾಶಿಯಲ್ಲಿ ವೇದವ್ಯಾಸರು ಮತ್ತು ಪುರಂದರವಿಠಲರ ಕರುಣೆಗೆ ಒಳಗಾದನು. ಅನಂತರ ಸ್ವಪ್ನದಲ್ಲಿ 'ವಿಜಯವಿಠಲ' ಎಂಬ ಅಂಕಿತವನ್ನು ಪಡೆದು 'ವಿಜಯದಾಸ'ರಾದರು.

ವಿಜಯದಾಸರ ಪ್ರಮುಖ ಶಿಷ್ಯರಾದ ಮೋಹನದಾಸರು, ಗೋಪಾಲದಾಸರು, ವೇಣುಗೋಪಾಲ ವಿಠಲದಾಸರು, ಹಯವದನ ವಿಠಲದಾಸರು ಮೊದಲಾದವರು ಸಂಪ್ರದಾಯ ಮಾರ್ಗದಲ್ಲಿ ನಡೆದು ದಾಸಸಾಹಿತ್ಯಕ್ಕೆ ಚಾಲನೆ ನೀಡಿದರು. ಭಾಗಣ್ಣದಾಸರೆಂದು ಹೆಸರಾಗಿದ್ದ



ಗೋಪಾಲದಾಸರು ತಮ್ಮ ಮೂವರು ತಮ್ಮಂದಿರಿಗೂ ದಾಸದೀಕ್ಷೆ ಇತ್ತರು. ವಿಜಯ ದಾಸರ ಪುತ್ರರಾದ ಮೋಹನದಾಸರು 'ಕೋಲುಹಾಡು' ಎಂಬ ಕೃತಿಯನ್ನು ರಚಿಸಿದರು.

೭. **ಜಗನ್ನಾಥದಾಸರು:** ನಾಲ್ಕು ವೇದಗಳಲ್ಲಿಯೂ ಪಂಡಿತರಾದ ಶ್ರೀನಿವಾಸಾಚಾರ್ಯರು ವಿದ್ಯಾಮದದಿಂದ ಬೀಗುತ್ತ ಗುರುದ್ರೋಹದ ಅಪರಾಧಗೈದು ಮಾರಣಾಂತಿಕ ಕಾಯಿಲೆ ಅನುಭವಿಸುತ್ತಿದ್ದರು. ವಿಜಯದಾಸರನ್ನು ಮೊರೆ ಹೋಗುವಂತೆ ಮಂತ್ರಾಲಯ ಪ್ರಭುಗಳಾದ ರಾಘವೇಂದ್ರಸ್ವಾಮಿಗಳಿಂದ ಅವರಿಗೆ ಸ್ವಪ್ನಾದೇಶವಾಯಿತು. ಪಶ್ಚಾತ್ತಾಪಪಟ್ಟು ಗೋಪಾಲದಾಸರ ಬಳಿಗೆ ಬಂದರು. ೪೦ ವರ್ಷಗಳ ಆಯುಸ್ಸನ್ನು ಅವರಿಂದ ಪಡೆದು ಪಂಢರಾಪುರದ ಪಾಂಡುರಂಗನಿಂದಲೇ ಚಂದ್ರಭಾಗಾನದಿಯಲ್ಲಿ 'ಜಗನ್ನಾಥವಿಠಲ' ಎಂಬ ಅಂಕಿತವನ್ನು ಪಡೆದರು. ಇವರು 'ಶ್ರೀ ಹರಿಕಥಾಮೃತಸಾರ' ಎಂಬ ಮೇರುಕೃತಿಯನ್ನು ದಾಸಸಾಹಿತ್ಯಕ್ಕೆ ಪ್ರದಾನ ಮಾಡಿದ್ದಾರೆ. ಜಗನ್ನಾಥದಾಸರ ಪ್ರಮುಖ ಶಿಷ್ಯರೆಂದರೆ ಲಿಂಗಸಗೂರು ಪ್ರಾಣೇಶದಾಸರು, ಕರ್ಜಗಿ ಶ್ರೀದ ವಿಠಲದಾಸರು, ಅಭಿನವ ಜನಾರ್ದನದಾಸರು ಮುಂತಾದವರು. ಇವರೆಲ್ಲರೂ ತಮ್ಮ ಅನನ್ಯ ಕೃತಿಗಳಿಂದ ದಾಸಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಇವರ ಶಿಷ್ಯ ಪ್ರಶಿಷ್ಯ ವರ್ಗದವರೂ ಸಹ ಸಾರಸ್ವತಲೋಕಕ್ಕೆ ವಿಶೇಷ ಕಾಣಿಕೆಯನ್ನಿತ್ತಿದ್ದಾರೆ.

೮. **ಮುದ್ದುಮೋಹನ ವಿಠಲದಾಸರು:** ಶ್ರೀವಿಜಯದಾಸರ ಪೀಳಿಗೆಯಲ್ಲಿ ಬಂದ ಮುದ್ದುಮೋಹನದಾಸರ ಅಂಕಿತ 'ತಂದೆ ಮುದ್ದು ಮೋಹನವಿಠಲ.' ಇಪ್ಪತ್ತನೆಯ ಶತಮಾನದಲ್ಲಿ ನಾಲ್ಕು ದಶಕಗಳಷ್ಟು ಕಾಲ ದಾಸಕೂಟದ 'ಮಹಾವ್ಯಾಕ್ಯ'ವನ್ನು ಕಾಪಾಡಿಕೊಂಡು ಬಂದ ಮಹಾಮಹಿಮರು ಇವರು. ಆಧುನಿಕ ಯುಗದಲ್ಲಿಯೂ ಈ ಪರಂಪರೆಯನ್ನು ಉಳಿಸಿ ಅನೇಕ ಭಕ್ತಜನರಿಗೆ ಅಂಕಿತಪ್ರದಾನ ಮಾಡಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಇವರಲ್ಲಿ ಉರಗಾದ್ರಿವಾಸ ವಿಠಲದಾಸರು ಮತ್ತು ತಂದೆ ವೆಂಕಟೇಶ ವಿಠಲದಾಸರು ಪ್ರಮುಖರು.

೯. **ಗುರುಗೋವಿಂದ ವಿಠಲದಾಸರು :** ಇವರು ಮುದ್ದುಮೋಹನ ವಿಠಲದಾಸರ ಕೊನೆಯ ಶಿಷ್ಯರು. ಪರಮಗುರುಗಳಿಂದ ಹಿಡಿದು ವೇಣುಗೋಪಾಲದಾಸರವರೆಗೆ ತಮ್ಮ ಪೀಳಿಗೆಯ ಚರಿತ್ರೆಯನ್ನು ರಚಿಸಿದರು. ಮಧ್ವಾಚಾರ್ಯರು ರಚಿಸಿದ ದಶೋಪನಿಷತ್ತುಗಳ ಭಾಷ್ಯದ ತಿರುಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದರು. 'ಶ್ರೀ ಗುರುಕೃಪಾ ಗ್ರಂಥಮಾಲೆ' ಯನ್ನು ಸ್ಥಾಪಿಸಿ ಅನೇಕ ಸದ್ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಇವರು 'ಶ್ರೀಹರಿದಾಸ ಕುಲತಿಲಕ' ಎಂಬ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಅಲ್ಲದೆ, ೨೬೫ ಜನರಿಗೆ ಅಂಕಿತಪ್ರದಾನ ಮಾಡಿದ್ದಾರೆ. ಅವರ ಪ್ರಮುಖ ಶಿಷ್ಯರಾದ ಜಾಂಬವತಿ ವಿಠಲರು ೧೯೯೬ ರಲ್ಲಿ 'ಹರಿದಾಸ ಸಾಹಿತ್ಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಕೇಂದ್ರ' ವನ್ನು ಸ್ಥಾಪಿಸಿದ್ದಾರೆ. ಆಮೂಲಕ ಸಾವಿರಾರು ವಿದ್ಯಾರ್ಥಿಗಳಿಗೆ ಉಚಿತ ಹರಿದಾಸ ಶಿಕ್ಷಣ ಪರೀಕ್ಷೆಗಳನ್ನು ನಡೆಸಿ, ಪ್ರಶಸ್ತಿಪ್ರದಾನವನ್ನು ಮಾಡುತ್ತಿದ್ದಾರೆ.

೧೦. ಕೇವಲ ಹರಿದಾಸರಲ್ಲದೆ, ಮಹಿಳಾ ಹರಿದಾಸಿಯರೂ ಕೂಡ ಸಾರಸ್ವತಲೋಕಕ್ಕೆ ಉಜ್ವಲವಾದ ಕೊಡುಗೆಯನ್ನು ಇತ್ತಿದ್ದಾರೆ. ೧೭ನೇ ಶತಮಾನದ ಗಲಗಲಿ ಅವ್ವ, ೧೮ನೇ ಶತಮಾನದ ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ, ಓರ್ವಾಯಿ ಲಕ್ಷ್ಮಿಬಾಯಿ, ೧೯ ಮತ್ತು ೨೦ನೇ ಶತಮಾನದಲ್ಲಿ ಅಂಬಾಬಾಯಿ, ನರಸಾಬಾಯಿ, ಜೀವೂಬಾಯಿ ಮುಂತಾದವರು ಇವರಲ್ಲಿ ಪ್ರಮುಖರು. ೨೦ ಮತ್ತು ೨೧ನೇ ಶತಮಾನದ ಹರಿದಾಸಿಯರಾದ ಟಿ.ಎನ್. ನಾಗರತ್ನ, ಎನ್.ಜಿ. ವಿಜಯಲಕ್ಷ್ಮಿ, ರುಕ್ಮಿಣಿ ಗಿರಿಮಾಜಿ – ಇವರೆಲ್ಲರೂ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಹೀಗೆ ಹರಿದಾಸ ಸಾಹಿತ್ಯವು ಗಂಗಾಪ್ರವಾಹದಂತೆ ಹರಿಯುತ್ತಲೇ ಇದೆ. ⌘



# ಸ್ನೇಹಿತರೆ, ಭ್ರಷ್ಟಾಚಾರವನ್ನು ಕೊನೆಗಾಣಿಸೋಣ ಬನ್ನಿ !

**ಟಿಪ್ಪುಸುಲ್ತಾನ ಜೆ. ನಾಯ್ಕವಾಡಿ**
**ಅಧ್ಯಕ್ಷರು, ವಿವೇಕಾನಂದ ಯುವ ಸ್ವಯಂಸೇವಾ ಸಂಘ, ಹಾನಗಲ್**

ಎಲ್ಲಿಗೆ ಬಂತು, ಯಾರಿಗೆ ಬಂತು ನಲವತ್ತೇಳರ ಸ್ವಾತಂತ್ರ್ಯ? ಭ್ರಷ್ಟ ರಾಜಕಾರಣಿಗಳ ಜೇಬಿಗೆ ಬಂತು, ಲಂಚಬಾಕರ ಹಣದ ದಾಹಕ್ಕೆ ಬಂತು ನಲವತ್ತೇಳರ ಸ್ವಾತಂತ್ರ್ಯ! ಭಾರತ ಸ್ವಾತಂತ್ರ್ಯ ಪಡೆದು ೬೫ ವರ್ಷಗಳು ಸಂದಿವೆ. ಹೀಗಿರುವಾಗ ಭಾರತದ ಸಾಧನೆ ಏನು ಎಂಬುದನ್ನು ಅವಲೋಕಿಸಿದಾಗ ಕೇವಲ ಭ್ರಷ್ಟಾಚಾರ, ಭಯೋತ್ಪಾದನೆಯಂತಹ ಪೆಡಂಭೂತಗಳು ನಮ್ಮ ಕಣ್ಣಿಗೆ ರಾಚುತ್ತವೆ. ಜಾಗತಿಕವಾಗಿ ತಲೆಯೆತ್ತುತ್ತಿರುವಾಗಲೇ ಭಾರತ ಇಂತಹ ದುಷ್ಟಶಕ್ತಿಗಳ ವ್ಯೂಹಕ್ಕೆ ಸಿಲುಕಿ ಒದ್ದಾಡುತ್ತಿರುವುದು ತುಂಬಾ ಶೋಚನೀಯ. ಭಾರತದ ಸದ್ಯದ ಪರಿಸ್ಥಿತಿಯನ್ನು ಸ್ಪಷ್ಟವಾಗಿ ನೋಡಿದಾಗ ಇಂದು ಭ್ರಷ್ಟಾಚಾರವು ಭಯೋತ್ಪಾದನೆಗಿಂತಲೂ ದೊಡ್ಡ ತಲೆನೋವಾಗಿ ಸಂಭವಿಸಿದೆಯೇನೋ ಎನಿಸುತ್ತದೆ.

ಭ್ರಷ್ಟಾಚಾರದ ಈ ಗೆದ್ದಲುಹುಳು ಭಾರತದ ಎಲ್ಲಾ ಕ್ಷೇತ್ರಗಳನ್ನೂ ಪ್ರವೇಶಿಸಿ, ಭಾರತೀಯರ ನೈತಿಕತೆಯನ್ನು ನಾಶಮಾಡಿ ಇಡೀ ವ್ಯವಸ್ಥೆಯನ್ನೇ ಪೊಳ್ಳುಮಾಡಿದೆ. ಭಯೋತ್ಪಾದಕರ ದಾಳಿಯಾದರೆ ಅದನ್ನು ಮಿಲಿಟರಿ ಪಡೆಯಿಂದ ತಡೆಗಟ್ಟಬಹುದು. ಆದರೆ ಭ್ರಷ್ಟಾಚಾರದ ಇಂತಹ ಭಯಾನಕ ದಾಳಿಯನ್ನು ತಡೆಗಟ್ಟಲು ಯಾವ ಪಡೆಯಿದೆ? ಲೋಕಾಯುಕ್ತ ಸಂಸ್ಥೆ ಇದೆ ನಿಜ. ಆದರೆ ಲೋಕಾಯುಕ್ತ ಸಂಸ್ಥೆಯೊಂದೇ ಎಷ್ಟು ತಾನೇ ಭ್ರಷ್ಟಾಚಾರವನ್ನು ತಡೆಗಟ್ಟಬಹುದು? ಭಯೋತ್ಪಾದಕರು ದಾಳಿ ಮಾಡಬೇಕಾದರೆ ನಿರ್ದಿಷ್ಟ ಗುರಿಯೊಂದನ್ನು ಇಟ್ಟುಕೊಂಡು ನಿರ್ದಿಷ್ಟ ಪ್ರದೇಶದ ಮೇಲೆ ದಾಳಿ ಮಾಡುತ್ತಾರೆ. ಆದರೆ ಭ್ರಷ್ಟಾಚಾರದ ವಿರಾಟ್ ಸ್ವರೂಪವೇ ಬೇರೆ. ಇದಕ್ಕೆ ನಿರ್ದಿಷ್ಟ ಗುರಿ, ನಿರ್ದಿಷ್ಟ ಸ್ಥಳವೆಂಬ ಪರಿಕಲ್ಪನೆಯೇನೂ ಇಲ್ಲ. ಇಡೀ ವ್ಯವಸ್ಥೆಯೇ ಇದರ ಗುರಿ. ಹೀಗೆ ವ್ಯಾಪಕವಾಗಿ ಹರಡಿರುವ ಭ್ರಷ್ಟಾಚಾರವೆಂಬ ಹೆಮ್ಮರದ ಬೇರುಗಳನ್ನು ನಿರ್ಮೂಲನ ಮಾಡುವುದಾದರೂ ಹೇಗೆ ಎಂಬುದೇ ನಮ್ಮ ಮುಂದಿರುವ ಯಕ್ಷಪ್ರಶ್ನೆ. ಈ ಕಾರಣದಿಂದಾಗಿಯೇ ಇಂದು ಭ್ರಷ್ಟಾಚಾರವು ಹೆಮ್ಮರವಾಗಿ ಬೆಳೆದು ನಮ್ಮನ್ನೇ ತುಳಿಯುವಷ್ಟರಮಟ್ಟಿಗೆ ತಲುಪಿದೆ.

ಭ್ರಷ್ಟಾಚಾರದ ಕಬಂಧ ಬಾಹುಗಳು ಎಷ್ಟು ವ್ಯಾಪಕವಾಗಿ ಚಾಚಿಕೊಂಡಿವೆ ಎಂದರೆ ಇಂದು ಹಲವಾರು ವೃತ್ತಿಗಳಲ್ಲಿ, ಉದ್ಯಮಗಳಲ್ಲಿ ತೊಡಗಿರುವ ಎಲ್ಲರನ್ನೂ ನಾವಿಂದು ಅನುಮಾನದಿಂದಲೇ ನೋಡುವಂತಹ ಪರಿಸ್ಥಿತಿ ಬಂದೊದಗಿದೆ. ಹಿಂದೊಮ್ಮೆ ಭ್ರಷ್ಟಾಚಾರದಿಂದ ಬಹಳಷ್ಟುಮಟ್ಟಿಗೆ ದೂರವಿದ್ದ ಹಲವಾರು ಕ್ಷೇತ್ರಗಳೂ ಕೂಡ ಇಂದು ಅದರ ತೆಕ್ಕೆಯೊಳಗೆ ಸೇರಿಕೊಳ್ಳತೊಡಗಿವೆ. ಇಂತಹ ಸಂದಿಗ್ಧ ಸ್ಥಿತಿಯಲ್ಲಿ ಭ್ರಷ್ಟಾಚಾರ ನಿರ್ಮೂಲನವೇ ಅಸಾಧ್ಯವೆಂಬ ನಕಾರಾತ್ಮಕ ಮನೋಭಾವನೆ ಎಲ್ಲ ವಲಯಗಳಲ್ಲಿ ಮೂಡಿರುವುದು ಅಸಹ್ಯಕರ. 'ಭ್ರಷ್ಟಾಚಾರ ನಿರ್ಮೂಲನೆ ಸಾಧ್ಯವಿಲ್ಲ' ಎಂದು ಅದನ್ನೊಂದು ಶಾಶ್ವತ ಸಮಸ್ಯೆ ಮಾಡಿಕೊಂಡು, ಪರೋಕ್ಷವಾಗಿ ಅದರ ಬೆಂಬಲಕ್ಕೆ ನಿಂತಿರುವ ರಣಹೇಡಿಗಳನ್ನು ಈಗಲಾದರೂ ಎಚ್ಚರಿಸಬೇಕಾದ ಅಗತ್ಯವಿದೆ. ಅಸಾಧ್ಯವಾದುದನ್ನು ಸಾಧ್ಯವಾಗಿಸುವ ಕರ್ತೃತ್ವ ಶಕ್ತಿ ಮಾನವನಲ್ಲಿದೆ. ಯಾವುದೇ ಒಂದು ಕಾರ್ಯಸಾಧನೆಗೂ ಮುಂಚೆ ನಾವು ಅದರ ಬಗ್ಗೆ ಹೊಂದಿರುವ ಮನೋಭಾವ ಮುಖ್ಯ.

**"ಯಾವುದೇ ವಾಸ್ತವತೆಗಿಂತ, ನಾವು ಅದರ ಬಗ್ಗೆ ಹೊಂದಿರುವ ಮನೋಭಾವ ಮುಖ್ಯವಾಗಿದೆ. ಏಕೆಂದರೆ ಅದೇ ನಮ್ಮ ಸಫಲತೆ ಅಥವಾ ವಿಫಲತೆಯನ್ನು ನಿರ್ಣಯಿಸುತ್ತದೆ."** ನಾರ್ಮನ್ ವಿನ್ಸೆಂಟ್ ಪೀಲೆ ಹೇಳಿರುವ ಈ ಅದ್ಭುತವಾದ ಸಾಲುಗಳು ಭ್ರಷ್ಟಾಚಾರದ ಬಗ್ಗೆ ನಿರ್ಲಕ್ಷ್ಯ ತಾಳಿರುವ ದುಷ್ಟರ ಮನಸ್ಸನ್ನು ನಿದ್ರಾವಸ್ಥೆಯಿಂದ ಹೊರತರಬೇಕಾಗಿದೆ ಎಂಬುದನ್ನು ಸೂಚಿಸುತ್ತದೆ. ಕಬ್ಬಿಣದ ಮಾಂಸಖಂಡ, ಉಕ್ಕಿನ ನರಮಂಡಲ, ವಿದ್ಯುತ್ತಿನ ಇಚ್ಛಾಶಕ್ತಿಯನ್ನು ಹೊಂದಿರುವ ಬಿಸಿರಕ್ತದ ತರುಣ ಪಡೆ ದೇಶದ ಅರ್ಧದಷ್ಟಿರುವಾಗ ಈ ಪೆಡಂಭೂತವನ್ನು ನಾಶ ಮಾಡಲಾಗುತ್ತಿಲ್ಲವೇಕೆ ಎಂಬ ಪ್ರಶ್ನೆಗಳು ನಮ್ಮನ್ನು ಕಾಡುತ್ತಿವೆಯೇ ಹೊರತು, ಅವು ನಮ್ಮನ್ನು ಕಾರ್ಯಪ್ರವೃತ್ತರನ್ನಾಗಿ ಮಾಡಲು ಬಿಡುತ್ತಿಲ್ಲ. ಹಲವಾರು ಅಭೂತಪೂರ್ವ ಹಗರಣಗಳು ದೇಶವನ್ನು ಕಾಡುತ್ತಿರುವಾಗ ಜನರು ತಾಳ್ಮೆಗೆಡುತ್ತಿದ್ದಾರೆ. "ಚುನಾವಣೆಗಳೇ ನಮ್ಮ ದೇಶದ ಉದ್ದಗಲಕ್ಕೂ ಇಂಚು-ಇಂಚನ್ನು ಬಿಡದೇ ಸರ್ವವ್ಯಾಪಕವಾಗಿ ಹರಡಿರುವ ಭ್ರಷ್ಟಾಚಾರದ ದೊಡ್ಡ ಬೇರುಗಳು" ಎಂದು ಮಾಜಿ ಮುಖ್ಯ ಚುನಾವಣಾ ಆಯುಕ್ತ ಎಸ್.ವೈ. ಖುರೇಷಿಯವರು

ಆತಂಕ ವ್ಯಕ್ತಪಡಿಸಿದ್ದಾರೆ. ಅದರಂತೆ, ಇಂದು ನಡೆಯುತ್ತಿರುವುದು ಚುನಾವಣೆಗಳಲ್ಲ, ಅವು ಕೇವಲ ಹಣಬಲದ ಸ್ಪರ್ಧೆಗಳು ಎಂಬುದು ಸ್ಪಷ್ಟವಾಗುತ್ತಿದೆ.

ಕೆಲವರ್ಷಗಳ ಹಿಂದೆ, ಐದು ರಾಜ್ಯಗಳಲ್ಲಿ ಚುನಾವಣೆಗಳು ನಡೆದವು. ಆ ಸಂದರ್ಭದಲ್ಲಿ ತಮಿಳುನಾಡು ಒಂದರಲ್ಲಿಯೇ ದಿನಂಪ್ರತಿ ಒಂದು ಕೋಟಿ ರೂಪಾಯಿಯನ್ನು ವಶಪಡಿಸಿ ಕೊಳ್ಳಲಾಗುತ್ತಿತ್ತು ಎಂದು ಮೂಲಗಳು ತಿಳಿಸಿವೆ. ಇಂತಹ ಹಣದ ಹೊಳೆಗೆ ಭ್ರಷ್ಟಾಚಾರದ ವಿರಾಡ್ರೂಪವೆನ್ನದೇ ಮತ್ತೇನೆನ್ನಬೇಕು! ಇಂದು ವ್ಯಕ್ತಿಯ ಜೀವನ ಕೇವಲ ಸ್ವಾರ್ಥಕ್ಕೆ ಸೀಮಿತವಾಗಿ ಬಿಟ್ಟಿದೆ. ಪ್ರತಿಯೊಂದು ಕಾರ್ಯದ ಹಿಂದೆಯೂ ಕೇವಲ ಸ್ವಾರ್ಥವೇ ಪ್ರಮುಖವಾಗಿದೆ. ಅನೈತಿಕತೆ, ಅರಾಜಕತೆ ಮತ್ತು ಸ್ವಾರ್ಥ ಭಾವನೆಗಳು ಸಮಾಜದಲ್ಲಿ ತಾಂಡವವಾಡುತ್ತಿರುವಾಗ, ಇಡೀ ಸಮಾಜವೇ ಭ್ರಷ್ಟತೆಯಲ್ಲಿ ಮುಳುಗಿಹೋಗಿದೆಯೇನೋ ಎಂದು ಭಾಸವಾಗುತ್ತದೆ. ನಾವೆಲ್ಲರೂ ಕೇವಲ ಘೋಷಣೆಗಳಿಗೆ, ವಾದಗಳಿಗೆ ಬೆಂಬಲ ನೀಡುತ್ತಿದ್ದೇವೆಯೇ ಹೊರತು ಭ್ರಷ್ಟಾಚಾರ ನಿರ್ಮೂಲನೆಗಲ್ಲ ಎಂಬುದು ವೇದ್ಯವಾಗುತ್ತದೆ. ತಮ್ಮ ಕಳ್ಳ ಸಂಪತ್ತನ್ನು ಕತ್ತಲ ಟ್ರೆಜರಿಗಳಲ್ಲಿ ಬಚ್ಚಿಟ್ಟು ಮೇಲ್ನೋಟಕ್ಕೆ ಪ್ರಾಮಾಣಿಕತೆಯ ನಾಟಕವಾಡುತ್ತಿರುವ ಭ್ರಷ್ಟ ಪುಢಾರಿಗಳಿಗೆ ತಕ್ಕ ಶಾಸ್ತಿ ಮಾಡಬೇಕಾಗಿದೆ.

ಭ್ರಷ್ಟಾಚಾರ ನಿರ್ಮೂಲನೆ ನಮ್ಮಿಂದಲೇ ಪ್ರಾರಂಭವಾಗಬೇಕು. ಭ್ರಷ್ಟಾಚಾರವು ಭಾರತಕ್ಕೆ ಅಂಟಿರುವ ಭಯಾನಕ ರೋಗದಂತೆ, ಬೆನ್ನುಹತ್ತಿದ ಬೇತಾಳನಂತೆ ಜೋತುಬಿದ್ದು ಕಾಡುತ್ತಿದೆ. ಒಂದು ವೇಳೆ ಭಾರತ ಇಂತಹ ಭಯಂಕರ ರೋಗದಿಂದ ಪಾರಾಗಿದ್ದೇ ಆಗಿದ್ದಲ್ಲಿ, ಒಂದಾನೊಂದು ಕಾಲದಲ್ಲಿ **'ಸೋನೆ ಕೀ ಚಿಡಿಯಾ'** ('ಚಿನ್ನದ ಹಕ್ಕಿ') ಎಂದು ಕರೆಯಲ್ಪಡುತ್ತಿದ್ದ ಭಾರತ ಮತ್ತೆ ತನ್ನ ಗತವೈಭವವನ್ನು ಪಡೆಯುವುದರಲ್ಲಿ ಅನುಮಾನವೇ ಇಲ್ಲ. ಆದರೆ ಈ ರೀತಿ ಆಗಬಹುದೇ? ನೀವು ಈ ರೀತಿ ಮಾಡಬಲ್ಲಿರಾ? ನೇರವಾಗಿ ನಾನು ನಿಮ್ಮನ್ನೇ ಪ್ರಶ್ನಿಸುತ್ತಿದ್ದೇನೆ. ಏಕೆಂದರೆ ಕೇವಲ ಕ್ರಾಂತಿಯ ಘೋಷಣೆಗಳನ್ನು ಕೂಗಿದರೆ, ಉಪವಾಸ ಮಾಡಿ ಸರಕಾರವನ್ನು ಬಗ್ಗಿಸಿದರೆ, ಭ್ರಷ್ಟಾಚಾರದ ವಿರುದ್ಧದ ಈ ಯುದ್ಧವನ್ನು ನಾವು ಗೆಲ್ಲಲು ಸಾಧ್ಯವಿಲ್ಲ. ಈ ಯುದ್ಧದಲ್ಲಿ ವಿಜಯಗಳಿಸಬೇಕಾದರೆ ಮೊದಲು ನಾವು ಬದಲಾಗಬೇಕು. 'ನೀನು ಬದಲಾಗುವ ತನಕ ವ್ಯವಸ್ಥೆಯನ್ನು ಬದಲಾಯಿಸಲು ಸಾಧ್ಯವಿಲ್ಲ.' (Unless you change you can't change the system) ಎಂದು ದೊಡ್ಡವರು ಹೇಳುತ್ತಾರೆ.

ಅಂಕಿಅಂಶಗಳ ಪ್ರಕಾರ ೨೦೦೯ ರಲ್ಲಿ ಭಾರತದಲ್ಲಿ ತಮ್ಮ ಕೆಲಸಕಾರ್ಯಗಳನ್ನು ಮಾಡಿಸಿಕೊಳ್ಳಲು ೫೪% ಭಾರತೀಯರು ಲಂಚವನ್ನು ನೀಡಿದ್ದಾರೆ. ಜಗತ್ತಿನ ೧೬೯ ರಾಷ್ಟ್ರಗಳಲ್ಲಿ ಭ್ರಷ್ಟಾಚಾರದ ವಿಷಯದಲ್ಲಿ ನಾವು ೪ನೇ ಸ್ಥಾನದಲ್ಲಿದ್ದೇವೆ. ೧೯೯೨ ರಿಂದ ೨೦೧೧ರ ವರೆಗೆ, ಅಂದರೆ ೧೯ ವರ್ಷಗಳ ಕಾಲಾವಧಿಯಲ್ಲಿ ೭೩ ಲಕ್ಷ ಕೋಟಿ ರೂಪಾಯಿಗಳಷ್ಟು ಭಾರೀ ಮೊತ್ತವು ಅಭೂತಪೂರ್ವ ಹಗರಣಗಳು ಮತ್ತು ಲಂಚಾವತಾರಕ್ಕೆ ಬಲಿಯಾಗಿದೆ. ಒಂದು ಅಂದಾಜಿನ ಪ್ರಕಾರ ಇಷ್ಟು ದೊಡ್ಡ ಪ್ರಮಾಣದ ಹಣದಿಂದ ೨,೪೦,೦೦,೦೦೦ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಬಹುದಿತ್ತು! ೧೪,೫೦,೦೦,೦೦೦ ಕಡಿಮೆ ಬಜೆಟ್ಟಿನ ಮನೆಗಳು ನಿರ್ಮಾಣವಾಗುತ್ತಿದ್ದವು ! ಪ್ರತಿಯೊಬ್ಬ ಭಾರತೀಯನಿಗೆ ೫೬,೦೦೦ ರೂಪಾಯಿ ಹಾಗೂ ಬಡತನ ರೇಖೆಗಿಂತ ಕೆಳಗಿರುವ ಪ್ರತಿಯೊಬ್ಬನಿಗೂ ೧,೮೨,೦೦೦ ರೂಪಾಯಿ ದೊರಕುತ್ತಿತ್ತು ! ಅಂದರೇ ಇಡೀ ದೇಶದ ಚಿತ್ರಣವೇ ಬದಲಾಗುತ್ತಿತ್ತಲ್ಲವೇ!

ಭಾರತವನ್ನು ಒಂದು ಬಡ ರಾಷ್ಟ್ರವೆಂದು ಕರೆಯುತ್ತೇವೆ. ವಿಪರ್ಯಾಸವೆಂದರೆ ಜಗತ್ತಿನ ಅತಿ ಹೆಚ್ಚಿನ ಶ್ರೀಮಂತರು ಇಲ್ಲಿಯೇ ವಾಸವಾಗಿದ್ದಾರೆ. ಇಲ್ಲದಿದ್ದರೆ ಸ್ವಿಸ್ ಬ್ಯಾಂಕಿನಲ್ಲಿ ಭಾರತದ ಅತಿ ದೊಡ್ಡ ಮೊತ್ತದ ಹಣ ಜಮೆಯಾಗುತ್ತಿರಲಿಲ್ಲ. ಅಂಕಿ-ಅಂಶಗಳ ಪ್ರಕಾರ ಸ್ವಿಸ್ ಬ್ಯಾಂಕಿನಲ್ಲಿ ಭಾರತೀಯರ ಒಟ್ಟು ೬೫,೨೨೩ ಶತಕೋಟಿ ರೂಪಾಯಿಗಳು ಜಮಾ ಆಗಿದೆ. ಅದು ನಮ್ಮ ಜಿ.ಡಿ.ಪಿ.ಯ ೬ ಪಟ್ಟು ಹೆಚ್ಚಾಗಿದೆಯಂತೆ. ಭಾರತ ತನ್ನ ಪ್ರಜೆಗಳ ಹೊಟ್ಟೆ ತುಂಬಿಸಲು ಮತ್ತು ದೇಶ ಮುನ್ನಡೆಸಲು ೩ ಲಕ್ಷ ಕೋಟಿ ಸಾಲ ತೆಗೆದುಕೊಳ್ಳಬೇಕಾಗುತ್ತದೆ. ಹೀಗಾಗಿ ಪ್ರತಿಯೊಬ್ಬ ವ್ಯಕ್ತಿಯ ಮೇಲಿರುವ ಸಾಲದ ಹೊರೆ ಹೆಚ್ಚಾಗುತ್ತಲೇ ಇದೆ. ಒಂದು ವೇಳೆ ಸ್ವಿಸ್ ಬ್ಯಾಂಕಿನಲ್ಲಿರುವ ಭಾರತೀಯರ ಒಟ್ಟಾರೆ ಕಪ್ಪುಹಣದಲ್ಲಿ ಶೇ. ೩೦ ರಿಂದ ೪೦ ರಷ್ಟು ಹಣವನ್ನು ಭಾರತಕ್ಕೆ ತಂದರೆ ನಾವು ಸಾಲಕ್ಕಾಗಿ ವಿಶ್ವಬ್ಯಾಂಕ್ ಮತ್ತು ಐ.ಎಮ್.ಎಫ್ ಮುಂದೆ ಕೈಚಾಚುವ ಅಗತ್ಯವೇ ಬೀಳುವುದಿಲ್ಲ.

ಸರಕಾರ ಎಲ್ಲಾ ಗ್ರಾಮಗಳಿಗೆ ರಸ್ತೆ ಸಂಪರ್ಕ ಕಲ್ಪಿಸುವ ಉದ್ದೇಶ ಹೊಂದಿದೆ. ಇದಕ್ಕೆ ೪೦ ಲಕ್ಷ ಕೋಟಿ ರೂಪಾಯಿಗಳ ಅಗತ್ಯವಿದೆ. ಒಂದು ವೇಳೆ ಸ್ವಿಸ್ ಬ್ಯಾಂಕಿನಲ್ಲಿರುವ ಕಪ್ಪುಹಣವನ್ನು ಭಾರತಕ್ಕೆ ವಾಪಸ್ ತಂದರೆ ಪ್ರತಿ ಗ್ರಾಮಕ್ಕೂ ನಾಲ್ಕು ಲೇನ್ ರಸ್ತೆ ಕಲ್ಪಿಸಬಹುದು. ಇಲ್ಲದಿದ್ದರೆ ಕನಿಷ್ಠಪಕ್ಷ ಆ ಕಪ್ಪುಹಣದ ಒಟ್ಟು ಮೊತ್ತದಲ್ಲಿ ಅರ್ಧದಷ್ಟಾದರೂ ಭಾರತ ತಲುಪಿದರೆ ಅದರಿಂದ ದೇಶದಲ್ಲಿ ೩೦ ಕೋಟಿ ಹೊಸ ಉದ್ಯೋಗಗಳನ್ನು ಸೃಷ್ಟಿ ಮಾಡಬಹುದು. ಪ್ರತಿಯೊಬ್ಬ ಭಾರತೀಯನಿಗೂ ಉಚಿತವಾಗಿ ೨೦೦೦ ರೂಪಾಯಿ ಕೊಡಬಹುದು. ಅಲ್ಲದೇ ಈ ರೀತಿ ೩೦ ವರ್ಷಗಳ ತನಕ ಮುಂದುವರಿಸಬಹುದು. ಅಂದರೆ ದೇಶದಲ್ಲಿ ಬಡತನವೇ ಇಲ್ಲದಂತಾಗುತ್ತದೆ.

ಇಷ್ಟೆಲ್ಲಾ ಆಗಲು ಖಂಡಿತ ಸಾಧ್ಯವಿದೆ. ಅದಕ್ಕೆಲ್ಲ ಭಾರತದ ಸಮಸ್ತ ಜನತೆಯ ಕೆಚ್ಚೆದೆಯ ಹೋರಾಟದ ಬೆಂಬಲ ಅವಶ್ಯವಾಗಿದೆ. ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಒಬ್ಬ ಭಗತ್‌ಸಿಂಗ್‌ನಂತಹ ಕ್ರಾಂತಿಕಾರಿ ಮನಸ್ಸು, ಗಾಂಧೀಜಿಯಂತಹ ಅಹಿಂಸಾವಾದಿ ಮನಸ್ಸು ಇದೆ ಎಂಬುದನ್ನು ನಾವೆಲ್ಲರೂ ಇವತ್ತು ಮರೆತಂತೆ ಕಾಣುತ್ತಿದೆ. ಅಂಥ ಮನಸ್ಸುಗಳನ್ನು ಎಚ್ಚರಗೊಳಿಸಿ ದೇಶದ ಉದ್ಧಾರಕ್ಕೆ ಅಣಿಗೊಳಿಸುವ ಕಾಲ ಈಗ ಸನ್ನಿಹಿತವಾಗಿದೆ. ಬನ್ನಿ ಸ್ನೇಹಿತರೇ ಬನ್ನಿ, ಭ್ರಷ್ಟಾಚಾರರಹಿತ ರಾಷ್ಟ್ರ ನಿರ್ಮಾಣಕ್ಕೆ ನಾವೆಲ್ಲರೂ ಒಗ್ಗಟ್ಟಾಗೋಣ, ಬನ್ನಿ. ⌘



# ಜೀವನ ಮಕರಂದ

('ಬದುಕಲು ಕಲಿಯಿರಿ' ಪುಸ್ತಕದ ಸಂಗ್ರಹ)

ಮೂಲ ಲೇಖಕರು : ಸ್ವಾಮಿ ಜಗದಾತ್ಮಾನಂದ  ಸಂಗ್ರಹ : ಡಾ. ಜಿ.ವಿ. ಕುಲಕರ್ಣಿ

ಅಧ್ಯಾಯ ಎರಡು

## ನಿಮ್ಮಲ್ಲಿದೆ ಅಪಾರ ಶಕ್ತಿ

**"ಮನುಷ್ಯನಾಗಿ ವಿಜೃಂಭಿಸುವ ಆತ್ಮದ ಪರಮ ಮಹಿಮೆಯ ಯಥಾವತ್ ಗುಣಗಾನ ಮಾಡಲು ವಿಜ್ಞಾನದ, ಧರ್ಮದ ಅಥವಾ ಇನ್ನಿತರ ಯಾವುದೇ ಗ್ರಂಥಗಳಿಗೆ ಈತನಕ ಸಾಧ್ಯವಾಗಿಲ್ಲ. ಭೂಮಿಯ ಮೇಲೆ ಇದ್ದ, ಇರುವ ಹಾಗೂ ಇರಬಲ್ಲ ಸರ್ವಶಕ್ತ, ಸರ್ವವೈಭವೋಪೇತ ದೇವರೆಂದರೆ ಮನುಷ್ಯಮಾತ್ರನೇ."**

**–ಸ್ವಾಮಿ ವಿವೇಕಾನಂದ**

**"ನಮ್ಮ ಶಕ್ತಿಸಾಮರ್ಥ್ಯದ ನೆಲೆಯಾಗಿ, ಪರಿಪೂರ್ಣತೆಯ ಗಣಿಯಾಗಿರುವ ಎಷ್ಟೋ ಸಂಪತ್ತು ಮನದಂತರಾಳದಲ್ಲಿ ಇಂದಿಗೂ ಶೋಧಿಸಲ್ಪಡದೆ ಜಡವಾಗಿಯೇ ಬಿದ್ದಿದೆ."**

**–ಡಾ. ಅಲೆಕ್ಸಿಸ್ ಕೆರೆಲ್**

**'ಬಿಂದುವಿನಲ್ಲಿ ಸಿಂಧು'** ಎಂಬ ಮಾತು ಪ್ರತಿಯೊಬ್ಬ ವ್ಯಕ್ತಿಗೂ ಅನ್ವಯಿಸುತ್ತದೆ. ನಮ್ಮ ದೇಹದ ರಚನೆಯನ್ನು ನೋಡಿದರೆ ಈ ಮಾತು ಮನದಟ್ಟಾಗುತ್ತದೆ. ನಮ್ಮ ದೇಹದ ಒಂದು ಬಿಂದು ರಕ್ತದಲ್ಲಿ ೫ ಮಿಲಿಯ ಕೆಂಪು ರಕ್ತಕಣಗಳಿವೆ, ೧೦ ಸಾವಿರ ಬಿಳಿಯ ರಕ್ತಕಣಗಳಿವೆ, ೫ ಲಕ್ಷ ಪ್ಲೇಟ್‌ಲೆಟ್‌ಗಳೂ ಇವೆ.

**'ಮನುಷ್ಯನ ಆಂತರ್ಯದಲ್ಲಿ ಅಪಾರ ಶಕ್ತಿಯಿದೆ.'** ಕಳೆದ ಐವತ್ತು ವರ್ಷಗಳಲ್ಲಿ ನಡೆದಿರುವ ವೈಜ್ಞಾನಿಕ ಪ್ರಗತಿಯು ಯಾರನ್ನೇ ಆದರೂ ದಂಗುಬಡಿಸುವಂತಿದೆ. ಬಾಹ್ಯ ಪ್ರಪಂಚದಲ್ಲಿ ಮನುಷ್ಯನ ಪ್ರಗತಿ ಆದಂತೆ ಅಂತರಂಗದಲ್ಲೂ ಪ್ರಗತಿ ಆಗಬೇಕು.

ಮನುಷ್ಯನು ಹೊರಗೆ ಎಷ್ಟೇ ಪ್ರಗತಿಯನ್ನು ಸಾಧಿಸಿದರೂ ತನ್ನ ಒಳಗಿರುವ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಇವುಗಳನ್ನು ಗೆಲ್ಲದಿದ್ದರೆ ಅನಾಹುತವಾಗುತ್ತದೆ. ನೊಬೆಲ್ ಬಹುಮಾನ ಪುರಸ್ಕೃತರಾದ ಬೆಲ್ಜಿಯಂ ದೇಶದ ಲೇಖಕ ಮೌರಿಸ್ ಮೆಟರ್‌ಲಿಂಕ್ ತಮ್ಮ 'ದಿ ಗ್ರೇಟ್ ಬಿಯಾಂಡ್' ಗ್ರಂಥದ ಪೀಠಿಕೆಯಲ್ಲಿ ಹೀಗೆ ಹೇಳುತ್ತಾರೆ: "ಅತಿ ದೊಡ್ಡ ಇಂಜಿನಿಯರ್, ಗಣಿತಜ್ಞ, ವೈದ್ಯ ಅಥವಾ ಆಕಾಶವಿಜ್ಞಾನಿ ಕೂಡ ಶೋಷಕನೂ, ಮಹಾಮೂರ್ಖನೂ ಆಗಬಲ್ಲ ಎಂಬುದನ್ನು ಜನ ಗಮನಿಸುತ್ತಿಲ್ಲ ಅಥವಾ ಮರೆತುಬಿಡುತ್ತಾರೆ." "ಜಗತ್ತಿನ ಸುಮಾರು ೨೧ ನಾಗರಿಕತೆಗಳಲ್ಲಿ ೧೯ ನಾಗರಿಕತೆಗಳು ಅವಸಾನ ಹೊಂದಿದ್ದು ಬಾಹ್ಯ ಆಕ್ರಮಣಗಳಿಂದಲ್ಲ, ಆಂತರಿಕ ನೈತಿಕ ಕುಸಿತದಿಂದ" ಎಂದು ಪ್ರಸಿದ್ಧ ಇತಿಹಾಸಜ್ಞ ಆರ್ನಾಲ್ಡ್ ಟಾಯ್ನಬಿ ಹೇಳಿದ್ದಾರೆ.

ಜೀವಶಾಸ್ತ್ರದಲ್ಲಿ ತಮ್ಮ ಸಂಶೋಧನೆಗಾಗಿ ನೊಬೆಲ್ ಬಹುಮಾನ ಗಳಿಸಿದ ಡಾ. ಅಲೆಕ್ಸಿಸ್ ಕೆರೆಲ್ ತಮ್ಮ 'ಅಜ್ಞಾತ ಮಾನವ' ಎಂಬ ಗ್ರಂಥದಲ್ಲಿ ಹೀಗೆ ಹೇಳುತ್ತಾರೆ: "ಜೀವಿಯಲ್ಲಿರುವ ಅದ್ಭುತ ಶಕ್ತಿಶಾಲಿಯಾದ ಮನಸ್ಸನ್ನು ಶರೀರಶಾಸ್ತ್ರಜ್ಞರೂ, ಅರ್ಥಶಾಸ್ತ್ರಜ್ಞರೂ ನಿರ್ಲಕ್ಷಿಸಿದ್ದಾರೆ. ವೈದ್ಯರ ಗಮನವೂ ಆ ಕಡೆಗೆ ಹರಿದಿಲ್ಲ."

ಹಿರಿಯ ಮನೋವಿಜ್ಞಾನಿ ಸಿಗ್ಮಂಡ್ ಫ್ರಾಯ್ಡ್ ಹೀಗೆ ಹೇಳುತ್ತಾರೆ: "ನಾನು ಇನ್ನೊಮ್ಮೆ ನನ್ನ ಜೀವನವನ್ನು ಪ್ರಾರಂಭಿಸುವುದಾದಲ್ಲಿ ಮನೋವಿಶ್ಲೇಷಣೆಗಿಂತಲೂ ಅತೀಂದ್ರಿಯ ವಿಚಾರಗಳ ಸಂಶೋಧನೆಗೇ ನನ್ನ ಜೀವನವನ್ನು ಮೀಸಲಾಗಿಡುತ್ತೇನೆ."

"ಸಂತರ, ಭಗವದ್ಭಕ್ತರ ಚಿತ್ರಗಳಲ್ಲಿ ಮುಖ್ಯವಾಗಿ ತಲೆಯ ಸುತ್ತಲೂ ಪ್ರಭಾವಲಯವನ್ನು ಚಿತ್ರಿಸಿರುವುದನ್ನು ಕಾಣುತ್ತೇವೆ. ...'ಸೈಕೀ' ಎಂದು ಕರೆಯಲಾದ ನಮ್ಮ ಮನಸ್ತತ್ವ ಅಥವಾ ಜೀವತತ್ತ್ವವು ಎಲುಬು, ರಕ್ತಮಾಂಸ, ನರಮಂಡಲಗಳಿಂದ ಕೂಡಿದ ನಮ್ಮ ಸ್ಥೂಲದೇಹದಿಂದ ಭಿನ್ನವಾದುದು. ಸತ್ತು ಹೋದ ಪ್ರಾಣಿಗಳಲ್ಲಾಗಲಿ, ಮನುಷ್ಯಶರೀರದಲ್ಲಾಗಲಿ ಪ್ರಭಾವಲಯದಿಂದ ಕೂಡಿದ ಈ ಶಕ್ತಿಶರೀರವು ಕಾಣಿಸುವುದಿಲ್ಲ... ಈ ಶಕ್ತಿಶರೀರವನ್ನೇ ನಮ್ಮ ದೇಶದ ಮನೀಷಿಗಳು ಸೂಕ್ಷ್ಮ ಶರೀರವೆಂದು ನಿರ್ದೇಶಿಸಿದ್ದರು." ಮಿದುಳಿನ ಶಸ್ತ್ರಚಿಕಿತ್ಸೆಯಲ್ಲಿ ಸಿದ್ಧಹಸ್ತರಾದ ಡಾ. ವೈಲ್ಡರ್ ಪೆನ್‌ಫೀಲ್ಡ್, "ಮಿದುಳಿಗಿಂತ ಮನಸ್ಸು ಸ್ವತಂತ್ರ ಅಸ್ತಿತ್ವ ಹೊಂದಿದೆ ಎಂದು ಒಪ್ಪಿಕೊಳ್ಳುವ ಕಾಲ ಸನ್ನಿಹಿತವಾಗಿದೆ" ಎನ್ನುತ್ತಾರೆ.

ಮನುಷ್ಯನಲ್ಲಿ ಚೈತನ್ಯಾಗ್ನಿ ಮಲಗಿ ನಿದ್ರಿಸುತ್ತಿದೆ. ಜಗತ್ತಿಗೆ ಬೆಳಕು ನೀಡುವವ ಸೂರ್ಯ ಎಂಬುದು ಎಲ್ಲರಿಗೂ ಗೊತ್ತು. ಸೂರ್ಯೋದಯವಾದ ಮೇಲೆಯೇ ಮನುಷ್ಯ ತನ್ನ ಕೆಲಸ ಪ್ರಾರಂಭಿಸುತ್ತಾನೆ. ಸೂರ್ಯ ಮುಳುಗಿದಾಗ ಚಂದ್ರ ಬೆಳಕು ನೀಡುತ್ತಾನೆ. ಇಬ್ಬರೂ ಇಲ್ಲದಾಗ ಬೆಳಕು ಯಾರು ನೀಡುತ್ತಾರೆ ಅಂದರೆ, 'ಅಗ್ನಿ' ಎಂದನಂತೆ ಯಾಜ್ಞವಲ್ಕ್ಯ. "ಅಗ್ನಿ ಇಲ್ಲದಾಗ?" ಎಂದು ಕೇಳಿದಾಗ "ಶಬ್ದವೇ ಬೆಳಕು" ಎಂದನಂತೆ.

"ಗೌತಮ ಬುದ್ಧ ತನ್ನ ಹಿಂದಿನ ಐನೂರು ಜನ್ಮಗಳ ಘಟನಾವಳಿಗಳನ್ನು ನೆನಪಿನಲ್ಲಿ ಇಟ್ಟುಕೊಳ್ಳಬಲ್ಲವನಾಗಿದ್ದನಂತೆ. ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆ ದೇಶಗಳಲ್ಲಿ ವಿಭಿನ್ನ ದೇಹ ಇಂದ್ರಿಯ ಮನಸ್ಸುಗಳಿಂದ ಪಡೆದ ಸಂಸ್ಕಾರಗಳನ್ನು ಬೆಳಗುವ ಆ ನಿತ್ಯ ನಿರಂತರವಾದ ಬೆಳಕು ಯಾವುದು? ಅದೇ

ಸತ್ಯದ ಬೆಳಕು. ಸಚ್ಚಿದಾನಂದದ ಬೆಳಕು. ಸಾವಿಲ್ಲದ ನೋವಿಲ್ಲದ ಶಾಶ್ವತವಾದ ಅರಿವಿನ ಬೆಳಕು."

"ಮುಖ್ಯವಾದ ವಿಚಾರ 'ನಾನು ಯಾರು?' ಎಂಬುದನ್ನು ಅರಿಯುವುದು. ಕುರಿಯ ಸಹವಾಸದಲ್ಲಿ ಬೆಳೆದ ಹುಲಿಯ ಮರಿಯಂತೆ ನಮ್ಮ ಬಾಳಾಗಿದೆ. ಅಜ್ಞಾನದಿಂದಾಗಿ ನಾವು ನಮ್ಮ ನಿಜರೂಪವನ್ನು ಮರೆತಿದ್ದೇವೆ."

"ತಿರಸ್ಕಾರ, ನಿಂದೆ ಮತ್ತು ಶೋಷಣೆಗೊಳಗಾದ ಯಾವುದೇ ಸಾಮಾಜಿಕ ವ್ಯವಸ್ಥೆಯಲ್ಲಿ, ಮೇಲಿನವರು ಅಥವಾ ಆಳುವವರು ತಮ್ಮ ಮೇಲೆ ಹೇರುವ, 'ದುಷ್ಟ, ನೀಚ, ಅಯೋಗ್ಯ, ಕೆಲಸಕ್ಕೆ ಬಾರದವ, ಅಪ್ರಯೋಜಕ' ಎಂಬಂಥ ಭಾವನೆಗಳು ತಿರಸ್ಕೃತರ ಅಥವಾ ದಬ್ಬಾಳಿಕೆಗೊಳಗಾದವರ ಸ್ವವ್ಯಕ್ತಿತ್ವದ ಚಿತ್ರದಲ್ಲಿ ಅಂಟಿಕೊಂಡುಬಿಡುತ್ತವೆ. ಈ ಭಾವನೆಗಳು ವ್ಯಕ್ತಿಯ ಪರಿಪೂರ್ಣ ಬೆಳವಣಿಗೆಗೆ ಆಘಾತವುಂಟುಮಾಡುತ್ತವೆ" ಎಂಬ ಮನೋರೋಗತಜ್ಞರ ಮಾತನ್ನು ಉದ್ಧರಿಸಿ ಇದರ ಪರಿಣಾಮದ ದುರಂತದ ಕಡೆಗೆ ಲೇಖಕರು ನಮ್ಮ ಗಮನ ಸೆಳೆಯುತ್ತಾರೆ.

ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಮತ್ತು ಬೌದ್ಧಿಕವಾಗಿ ತಮ್ಮನ್ನು ತಾವು ಕೀಳೆಂದು ತಿಳಿದುಕೊಂಡವರು ಮೊದಲು ತಮ್ಮ ಕೀಳರಿಮೆಯನ್ನು ಕಿತ್ತೆಸೆಯಬೇಕು.

"ತನ್ನನ್ನು ಅಶಕ್ತನೆಂದೂ ಪಾಪಿಯೆಂದೂ ಭಾವಿಸುವುದೇ ಅತಿ ದೊಡ್ಡ ಪಾಪ. ನೀವು ಏನನ್ನಾದರೂ ನಂಬಬೇಕಿದ್ದರೆ 'ನಾವು ಭಗವಂತನ ಮಕ್ಕಳೆಂದೂ, ಅವನ ಅಂಶವೆಂದೂ, ಅವನ ಅನಂತ ಶಕ್ತಿ ಮತ್ತು ಆನಂದದ ಪಾಲುಗಾರರು' ಎಂದೂ ನಂಬಿರಿ" ಎಂದು ಸ್ವಾಮಿ ವಿವೇಕಾನಂದರು ಹೇಳುತ್ತಿದ್ದರು.

ದ್ವೇಷ ಒಳ್ಳೆಯದಲ್ಲ. ಒಲವಿನ ಮಾರ್ದನಿ ಆಲಿಸುವುದು ಒಳ್ಳೆಯದು. 'ಅಹಂ' ಗೆ ಅಸಂಖ್ಯ ವೇಷಗಳಿವೆ. 'ನಾನು'ವಿನ ಆಳದಲ್ಲಿ ನಾವೆಲ್ಲಾ ಒಂದೇ. 'ಅಹಂ'ನ ಅಸ್ತಿತ್ವಕ್ಕಾಗಿ ನಡೆಸುವ ಹೋರಾಟದ ಭಾರವನ್ನು ಕಡಿಮೆ ಮಾಡುವ ಕಲೆಯನ್ನು ನಾವು ಇನ್ನೂ ಕಲಿತಿಲ್ಲ. ಈ ವಿಚಾರಗಳನ್ನು ಲೇಖಕರು ವಿವರವಾಗಿ ಚರ್ಚಿಸುತ್ತಾರೆ.

ಪ್ರಸಿದ್ಧ ಅಣುಭೌತ ವಿಜ್ಞಾನಿ ಡಾ. ಫಿಜೋ ಕಾಪ್ರಾ ಅವರು ಉಪನಿಷತ್ತು, ಬೌದ್ಧ ಧರ್ಮ ಮತ್ತು ಟಾವೋ ಮತಗಳನ್ನು ಅಭ್ಯಸಿಸಿ ವಿಶ್ವದ ಮೂಲಭೂತ ತತ್ತ್ವಗಳಲ್ಲಿರುವ ಸಾಮ್ಯಗಳನ್ನು ತಮ್ಮ 'ಟಾವೋ ಆಫ್ ಫಿಜಿಕ್ಸ್' ಪುಸ್ತಕದಲ್ಲಿ ವಿವರಿಸಿದ್ದನ್ನು ಲೇಖಕರು ಚರ್ಚಿಸುತ್ತಾರೆ. 'ಆತನ ಸಾನ್ನಿಧ್ಯ ಸದಾ ನಮ್ಮಲ್ಲಿ ಇದ್ದೇ ಇದೆ. ನಾವು ಅವನಿಂದಲೇ ಅಸ್ತಿತ್ವ–ಸತ್ವ–ಶಕ್ತಿಗಳನ್ನು ಪಡೆದು, ಅವನಲ್ಲೇ ಬದುಕಿ, ಅವನೆಡೆಗೇ ಹಿಂದಿರುಗುತ್ತೇವೆ' ಎನ್ನುತ್ತಾರೆ.

**ಹಗಲು ನಾಲ್ಕು ಜಾವ ಅಶನಕ್ಕೆ ಕುದಿವರು**
**ಇರುಳು ನಾಲ್ಕು ಜಾವ ವ್ಯಸನಕ್ಕೆ ಕುದಿವರು**
**ಅಗಸ ನೀರೊಳಗಿರ್ದು ಬಾಯಾರಿ ಸತ್ತಂತೆ**
**ನಮ್ಮೊಳಗಿರ್ದ ಮಹಾಘನವರಿಯರು ಚೆನ್ನಮಲ್ಲಿಕಾರ್ಜುನ**

ಎಂಬ ಅಕ್ಕ ಮಹಾದೇವಿಯ ವಚನವನ್ನು ಲೇಖಕರು ಇಲ್ಲಿ ಉದ್ಧರಿಸುತ್ತಾರೆ. ಬಹಳ ಸೂಕ್ತವಾದ ವಚನಾಮೃತವಿದು.

**'ನಂಬಿಕೆಯ ನಾಕ ನರಕ'** ಎಂಬ ವಿಷಯದ ಬಗ್ಗೆ ಬರೆಯುತ್ತ ಕೆಲವು ರೋಚಕ ಉದಾಹರಣೆಗಳನ್ನು ಕೊಡುತ್ತಾರೆ:

ದೆಹಲಿಯ ಸಮೀಪದ ಹಳ್ಳಿಯ ಹೊಲವೊಂದರಲ್ಲಿ ದುಡಿಯುವ ರೈತನೊಬ್ಬ ಅಸ್ತಮಾದಿಂದ ಬಳಲಿ, ರೋಗ ಉಲ್ಬಣಿಸಿದಾಗ ನಗರದ ಪ್ರಸಿದ್ಧ ಆಸ್ಪತ್ರೆಗೆ ಬಂದು ಡಾಕ್ಟರರನ್ನು ಕಾಣುತ್ತಾನೆ. ಡಾಕ್ಟರರು ಇವನನ್ನು ತಪಾಸಣೆ ಮಾಡಿ, ತಮ್ಮ ಡಿಗ್ರಿಗಳಿಂದ ಅಂಕಿತಗೊಂಡ ದೊಡ್ಡ ಹಾಳೆಯಲ್ಲಿ ಔಷಧಿ ಬರೆದು, "ಇದನ್ನು ಹದಿನಾಲ್ಕು ಭಾಗ ಮಾಡಿ ದಿನಕ್ಕೆರಡು ಸಲ ಸೇವಿಸಿ ನೀರುಕುಡಿ. ವಾರದ ನಂತರ ಮತ್ತೆ ಬಾ" ಎನ್ನುತ್ತಾರೆ. ರೈತ ಎರಡು ವಾರಗಳ ನಂತರ ಗುಣಮುಖನಾಗಿ ಡಾಕ್ಟರರನ್ನು ಹರಸುತ್ತ ಅವರ ರಾಮಬಾಣ ಔಷಧಿಯ ಗುಣಗಾನ ಮಾಡುತ್ತ ಬರುತ್ತಾನೆ. ಡಾಕ್ಟರರಿಗೆ ಅಚ್ಚರಿ. ತಾವು ಯಾವ ಔಷಧಿ ಬರೆದೆ ಎಂಬುದು ನೆನಪಾಗದೆ ಕುತೂಹಲದಿಂದ, "ನಾನು ಕೊಟ್ಟ ಪ್ರಿಸ್ಕ್ರಿಪ್ಶನ್ ಪೇಪರ್ ತೋರಿಸು" ಎನ್ನುತ್ತಾರೆ. ಹಳ್ಳಿಯ ರೈತ, "ಆ ಕಾಗದವನ್ನೇ ಹದಿನಾಲ್ಕು ಭಾಗ ಮಾಡಿ ಸೇವಿಸಿದೆ, ಡಾಕ್ಟರರೇ" ಎನ್ನುತ್ತಾನೆ. ಈ ಘಟನೆ ಕೆಲವು ವರ್ಷಗಳ ಹಿಂದೆ 'ದಿ ಹಿಂದೂ' ಪತ್ರಿಕೆಯಲ್ಲಿ ವರದಿಯಾಗಿತ್ತು.

ಫಾಶೀ ಶಿಕ್ಷೆಯಾದ ವ್ಯಕ್ತಿಯೊಬ್ಬನನ್ನು, ನ್ಯಾಯಾಧೀಶರ ಅನುಮತಿ ಪಡೆದು ಒಬ್ಬ ಮನಶ್ಶಾಸ್ತ್ರಜ್ಞ ತನ್ನ ಪ್ರಯೋಗಾಲಯಕ್ಕೆ ಕರೆತಂದನಂತೆ. ಅವನನ್ನು ಮಲಗಿಸಿ, ಕಣ್ಣಿಗೆ ಪಟ್ಟಿಕಟ್ಟಿ, ಕಾಲುಕಟ್ಟಿ, ಅವನ ರಕ್ತನಾಳಕ್ಕೆ ಗಾಯ ಮಾಡಿ, ಬದಿಯಲ್ಲಿ ಒಂದು ಟ್ಯೂಬನ್ನು ಜೋಡಿಸಿದನು. ಅವನಿಗೆ ಕೇಳಿಸುವಂತೆ ಒಬ್ಬ ಹಿರಿಯ ತಜ್ಞ ಇನ್ನೊಬ್ಬನಿಗೆ ಹೇಳಿದ, "ಇವನಿಗೆ ನೇಣು ಶಿಕ್ಷೆ ಆಗಿದೆ. ಇವನಿಗೆ ನೋವಾಗದಂತೆ ಸಾಯಿಸಬೇಕೆಂದು ಇಲ್ಲಿಗೆ ತಂದಿದ್ದೇವೆ. ಇಲ್ಲಿ ಅವನ ರಕ್ತ ಹನಿಹನಿಯಾಗಿ ಟ್ಯೂಬಿನಿಂದ ಕೆಳಗಿಟ್ಟ ಟಬ್ಬಿನಲ್ಲಿ ಬೀಳುತ್ತಿದೆ. ಅದು ಮೂರೂವರೆ ಲೀಟರ್ ಆದರೆ ಇವನು ಸಾಯುತ್ತಾನೆ." ನಂತರ, 'ಅರ್ಧ ಲೀಟರಾಯಿತು', 'ಒಂದು ಲೀಟರ್ ಆಯಿತು' ಎನ್ನುತ್ತ ಕೊನೆಗೆ ಮೂರುವರೆ ಲೀಟರ್ ಆಯಿತು ಎಂದಾಗ ಅವನು ನಿಜವಾಗಿ ಸತ್ತುಹೋದನಂತೆ. ಟ್ಯೂಬಿನಿಂದ ಕೆಳಗೆ ಬೀಳುತ್ತಿದ್ದ ದ್ರವ ಅವನ ರಕ್ತವಾಗಿರಲಿಲ್ಲ, ನೀರಾಗಿತ್ತು. ಅವನಿಗೆ ತನ್ನ ರಕ್ತವೇ ಸೋರುತ್ತಿದೆ ಎಂಬ ಭ್ರಮೆಯಾಗಿತ್ತು.

ಸಭಾಕಂಪದಿಂದ ಮಾತಾಡಲು ಸಾಧ್ಯವಾಗದ ಒಬ್ಬ ವ್ಯಕ್ತಿಗೆ ಅವನ ಸುಪ್ತಾವಸ್ಥೆಯನ್ನು ಉದ್ದೇಶಿಸಿ, 'ನೀನು ಸಲೀಸಾಗಿ ಮಾತನಾಡಬಲ್ಲೆ, ಮಾತನಾಡುತ್ತಿ' ಎಂಬ ಸಂದೇಶ ಕೊಟ್ಟಾಗ, ಅವನು ಸುಪ್ತಾವಸ್ಥೆಯಲ್ಲಿಯೇ ಎದ್ದುನಿಂತು ಮಾತನಾಡ ತೊಡಗಿದನಂತೆ. ಇಂತಹ ಹಲವಾರು ಉದಾಹರಣೆಗಳು ಇಲ್ಲಿವೆ.

ಜಪಾನ್ ದೇಶದವರು ಬುದ್ಧಿಶಕ್ತಿಯಲ್ಲಿ, ದೇಹಶಕ್ತಿಯಲ್ಲಿ ಭಾರತೀಯರಿಗಿಂತ ಬಲಿಷ್ಠರೇನಲ್ಲ. ಆದರೂ ಅವರೇಕೆ ಬಹಳ ಮುಂದೆ ಬಂದಿದ್ದಾರೆ? ಮಕ್ಕಳಿಗೆ ಬಾಲ್ಯದಿಂದ ದೊರೆಯುವ ಶಿಕ್ಷಣ. " 'ಉದಯರವಿ'ಯ ದೇಶದವರು ನಾವು. ಯಾರಿಗಿಂತಲೂ ಕಡಿಮೆ ಇಲ್ಲ" ಎಂಬ ಅಭಿಮಾನವನ್ನು

ಅವರಲ್ಲಿ ಬಿತ್ತಲಾಗುತ್ತಿದೆ. ಹಾಗೆಯೇ ಇಸ್ರೇಲಿನ ಪ್ರಗತಿಗೆ ಕಾರಣ ಅವರ ದೇಶಪ್ರೇಮ, ಪ್ರತಿಭೆ ಮತ್ತು ಪರಾಕ್ರಮ.

**'ಶ್ರದ್ಧೆಯಿಂದ ಶಕ್ತಿವೃದ್ಧಿ', 'ಕತ್ತಲೆಯನ್ನು ದ್ವೇಷಿಸಿದರೆ ಸಾಲದು, ಬೆಳಕನ್ನು ಪ್ರೀತಿಸಲು ಕಲಿಯಬೇಕು.'** 'ಶ್ರದ್ಧೆ ಒಂದು ಆತ್ಮಗುಣ, ಮನಸ್ಸಿನ ಒಂದು ಮಹಾ ಅಸ್ತ್ರ. ಅದರ ಉಪಯೋಗವನ್ನು ಎಲ್ಲರೂ, ಎಲ್ಲ ಕಾಲದಲ್ಲೂ ಪಡೆಯಬಹುದು. ನಮ್ಮ ಆಯುಸ್ಸು, ಆರೋಗ್ಯ, ಉದ್ಯಮ, ಆನಂದ – ಈ ಎಲ್ಲವುಗಳ ಮೇಲೆ ಶ್ರದ್ಧೆಯ ಪರಿಣಾಮ ಆಗುವುದು ಶತಸ್ಸಿದ್ಧ.

**'ಶ್ರದ್ಧಾವಾನ್ ಲಭತೇ ಜ್ಞಾನಂ'** ವಿದ್ಯಾರ್ಥಿಗಳಲ್ಲಿ ಶ್ರದ್ಧೆಯನ್ನು ಕುದುರಿಸಿದರೆ ಅವರು ಜ್ಞಾನಾರ್ಜನೆಯನ್ನು ಸುಲಭವಾಗಿ ಮಾಡಬಹುದು. **'ಬದುಕಿಗೊಂದು ಬೆಳಕು ಬೇಕು'.** ಅದರಿಂದ ಪ್ರಗತಿ ಸಾಧ್ಯ. 'ಬಹುಜನ ಹಿತಾಯ' ಎಂಬ ತತ್ತ್ವಕ್ಕಾಗಿ ನಮ್ಮ ಜೀವನ ಮುಡಿಪಾಗಿರಬೇಕು. ಅದರಿಂದ ಮಾತ್ರವೇ ದೇಶದ ಉದ್ಧಾರ ಸಾಧ್ಯ. ⌘

**ಪುಸ್ತಕ ಪರಿಚಯ**

## 'ಸೃಜನಾತ್ಮಕ, ಸರಸ, ಹೃದ್ಯ ಅನುವಾದ'

### ಸಂಗ್ರಹ ರಾಮಾಯಣ, ಭಾರತ, ಭಾಗವತ

**ಅನುವಾದ :** ಸಿ.ಪಿ.ಕೆ. **ಪ್ರಕಾಶಕರು :** ಲಕ್ಷ್ಮಿ ಪ್ರಿಂಟಿಂಗ್ ಆಂಡ್ ಪಬ್ಲಿಷಿಂಗ್ ಹೌಸ್, ನಂ. ೩೪೧, ಕಾಳಮ್ಮನ ದೇವಸ್ಥಾನದ ಬೀದಿ, ಮೈಸೂರು ೫೭೦ ೦೦೧. **ಪುಟಗಳು :** ೭೦೪ ; **ಬೆಲೆ :** ರೂ. ೬೦೦/–




ಸಿ.ಪಿ.ಕೆ. ಎಂಬ ಕಾವ್ಯನಾಮದಿಂದ ಪ್ರಖ್ಯಾತರಾಗಿರುವ ಡಾ. ಸಿ.ಪಿ. ಕೃಷ್ಣಕುಮಾರ್ ಮುನ್ನೂರಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿ ಕನ್ನಡಾಂಬೆಯ ಕೈಂಕರ್ಯವನ್ನು ಅತ್ಯಂತ ಯಶಸ್ವಿಯಾಗಿ, ಬಹುಮುಖವಾಗಿ ನೆರವೇರಿಸಿದ್ದಾರೆ. ಸಂಸ್ಕೃತಭಾಷೆಯ ಗ್ರಂಥಗಳನ್ನು ಬಹು ಸಮರ್ಥವಾಗಿ ಕನ್ನಡಭಾಷೆಗೆ ಅನುವಾದಮಾಡುವ ಕಾರ್ಯದಲ್ಲಿ ಅವರು ಸಿದ್ಧಹಸ್ತರಾಗಿ, ಹತ್ತಾರು ಗಣ್ಯಗ್ರಂಥಗಳನ್ನು ಕನ್ನಡಸಾಹಿತ್ಯ ಭಂಡಾರಕ್ಕೆ ಸಮರ್ಪಿಸಿದ್ದಾರೆ. ಈ ಗುಂಪಿನಲ್ಲಿ 'ರಾಮಾಯಣ', 'ಮಹಾಭಾರತ' ಮತ್ತು 'ಭಾಗವತ' ಎಂಬ ಮೂರು ಗ್ರಂಥಗಳ ಕನ್ನಡಾನುವಾದವು ಸುಮಾರು ೭೦೦ ಪುಟಗಳ ಬೃಹತ್ ಸಂಪುಟವಾಗಿ ಹೊರಬಂದು, ಅದು ಸಿ.ಪಿ.ಕೆ. ಅವರ ಭಾಷಾಂತರ ಕೌಶಲದ ಕೀರ್ತಿಶಿಖರವಾಗಿದೆ.

ಸುಮಾರು ೭೫ ವರ್ಷಗಳ ಹಿಂದೆ ಪಂಡಿತ ಎ.ಎಂ. ಶ್ರೀನಿವಾಸಾಚಾರಿಯರ್ ಎಂಬ ಹಿರಿಯ ವಿದ್ವಾಂಸರೊಬ್ಬರು ಈ ಮೇಲ್ಕಂಡ ಮೂರೂ ಗ್ರಂಥಗಳ ಸಾರಸಂಗ್ರಹವೊಂದನ್ನು ಹೊರತಂದಿದ್ದರು. ಅದು ಸಂಸ್ಕೃತ ಲಿಪಿಯಲ್ಲಿತ್ತು. ಆ ಸಂಗ್ರಹವನ್ನು ಮುಂದಿಟ್ಟುಕೊಂಡು ಸಿ.ಪಿ.ಕೆ. ಅವರು ಆ ಶ್ಲೋಕಗಳನ್ನೆಲ್ಲ ಕನ್ನಡ ಲಿಪಿಯಲ್ಲಿ ಎದ್ದುಕಾಣುವಂತೆ ಮೊದಲಿಗೆ ಬರೆದು, ಅವುಗಳಡಿಯಲ್ಲಿಯೇ ಅವುಗಳನ್ನು ಕನ್ನಡಕ್ಕೆ ಭಾಷಾಂತರಿಸಿಕೊಟ್ಟಿದ್ದಾರೆ. ಶ್ರೀನಿವಾಸಾಚಾರಿಯರ್ ಅವರನ್ನು ಕುರಿತು ಸಿ.ಪಿ.ಕೆ. ಅವರು, "ಅವರ ವಿದ್ವತ್ತು ಹಾಗೂ ಸಂಗ್ರಹಕೌಶಲ ಅದ್ಭುತವಾದುದು; 'ಸೃಜನಾತ್ಮಕವಾದ ಸಂಗ್ರಹ' ಕಾರ್ಯ ಅವರದು" ಎಂದು ಮೆಚ್ಚಿ ಬರೆದಿದ್ದಾರೆ. ಈ ಮಾತನ್ನೇ ಮುಂದುವರೆಸಿ ಹೇಳುವುದಾದರೆ ಸಿ.ಪಿ.ಕೆ. ಅವರ ಈ ಅನುವಾದ ಕೂಡ 'ಸೃಜನಾತ್ಮಕವಾದುದು, ಸರಸವಾದುದು, ಹೃದ್ಯವಾದುದು. ಸಿ.ಪಿ.ಕೆ. ಅವರು ಮೂಲತಃ ಒಬ್ಬ ಶ್ರೇಷ್ಠ ಕವಿ; ಆ ಕವಿತ್ವರಚನಾಗುಣವೇ ಈ ಅನುವಾದದಲ್ಲಿಯೂ ಕ್ರಿಯಾಶೀಲವಾಗಿದ್ದು ಇದನ್ನೊಂದು ಸೃಜನಶೀಲ, ಸ್ವೋಪಜ್ಞ ಪ್ರತಿಭಾಪೂರ್ಣ ಗುಣಗಳಿಂದ ತುಂಬಿದ ಮಹತ್ಕೃತಿಯನ್ನಾಗಿ ರೂಪಿಸಿಬಿಟ್ಟಿದೆ.

ರಾಮಾಯಣ, ಮಹಾಭಾರತ ಮತ್ತು ಭಾಗವತವೆಂಬ ಈ ಮೂರು ಗ್ರಂಥಗಳು ಭಾರತೀಯ ಸಂಸ್ಕೃತಿಯ ಆಧಾರಸ್ತಂಭಗಳು, ರತ್ನತ್ರಯಗಳು, ಮೂರು ಕಣ್ಣುಗಳು ಎಂದು ಹೇಳಬಹುದು. ಅವುಗಳಲ್ಲಿ ಪ್ರತಿಪಾದಿತವಾಗಿರುವ ಜೀವನ ಮೌಲ್ಯಗಳು ಕಾಲದೇಶಗಳ ಎಲ್ಲೆಯನ್ನು ಮೀರಿ ಎಲ್ಲ ಕಾಲಕ್ಕೂ ಉಪಾದೇಯವಾಗಿರುವಂಥವು. ಮೂಲದಲ್ಲಿ ಅವೆಲ್ಲ ಬಹು ದೊಡ್ಡ ದೊಡ್ಡ ಗ್ರಂಥಗಳು. ಮಹಾಭಾರತವಂತೂ ಒಂದು ಲಕ್ಷ ಶ್ಲೋಕಗಳಿಂದ ಕೂಡಿದ್ದು ಜಗತ್ತಿನ ಅತ್ಯಂತ ದೊಡ್ಡ ಮಹಾಕಾವ್ಯವೆಂಬ ಗೌರವಕ್ಕೆ ಪಾತ್ರವಾಗಿದೆ. ಅವುಗಳನ್ನು ಮೂಲದಲ್ಲಿ ಆಸ್ವಾದಿಸುವಷ್ಟು ವ್ಯವಧಾನವಿಲ್ಲದ ಕನ್ನಡಿಗರಿಗೆ, ಸಿ.ಪಿ.ಕೆ. ಅವರ ಈ ಅನುವಾದಗ್ರಂಥಗಳು ಕಲ್ಪವೃಕ್ಷದಂತಿವೆ, ಕಾಮಧೇನುವಿನಂತಿವೆ.

ಸಿ.ಪಿ.ಕೆ. ಅವರು ತಮ್ಮ ಭಾಷಾಂತರ ಕಾರ್ಯದಲ್ಲಿ ಅತ್ಯಂತ ಯಶಸ್ವಿಯಾಗಿದ್ದಾರೆ. ಸಂಸ್ಕೃತವಿದ್ವಾಂಸರಿಗೆ ಮಾತ್ರವೇ ವೇದ್ಯವಾಗುವ ಭಾವಸೌಂದರ್ಯವನ್ನು ಸವಿಗನ್ನಡದಲ್ಲಿ ಬಹು ಚೆನ್ನಾಗಿ ಸೆರೆಹಿಡಿದಿದ್ದಾರೆ. ಮೂಲರಚನೆಯ ಯಾವ ಸಂಗತಿಯೂ, ಯಾವ ಸ್ವಾರಸ್ಯವೂ ಕಳೆದುಹೋಗದಂತೆ ಎಚ್ಚರವಹಿಸಿದ್ದಾರೆ. ಅರ್ಥಾನುಸಂಧಾನಕ್ಕೆ ನೆರವಾಗುವಂತೆ ಮೂಲಶ್ಲೋಕಗಳಲ್ಲಿ ಇಲ್ಲದ ಪದಗಳನ್ನು ಅನುವಾದದಲ್ಲಿ ಸೇರಿಸಲೇಬೇಕಾದ ಸಂದರ್ಭ ಬಂದಾಗ, ಅವುಗಳನ್ನು ಆವರಣ ಚಿಹ್ನೆಗಳೊಳಗೆ ಇಟ್ಟಿರುವುದು ಗಮನಾರ್ಹ ಸಂಗತಿಯಾಗಿದೆ. ಮೂಲ ಶ್ಲೋಕಗಳೊಡನೆ ಸಿ.ಪಿ.ಕೆ. ಅವರ ಕನ್ನಡಾನುವಾದವನ್ನು ಹೋಲಿಸುವ, ತನ್ಮೂಲಕ ಎರಡರ ಸ್ವಾರಸ್ಯವನ್ನೂ ಸವಿಯುವ ಸೌಲಭ್ಯ ಪುಸ್ತಕ ದುದ್ದಕ್ಕೂ ಪ್ರಾಪ್ತವಾಗುತ್ತದೆ.

ಇಂದಿನ ಯುವಪೀಳಿಗೆಯವರು ಸಿ.ಪಿ.ಕೆ. ಅವರ ಈ ಉದ್ಗ್ರಂಥದತ್ತ ಕಣ್ಣುಹಾಯಿಸಿದರೆ, ಅವರ ಬದುಕು ಪರಿಪೂರ್ಣವಾಗುತ್ತದೆ, ಮಂಗಳಮಯವಾಗುತ್ತದೆ. ಸಿ.ಪಿ.ಕೆ. ಅವರು ಶ್ರಮಸಾಧ್ಯವೂ, ಅತ್ಯಂತ ಉಪಯುಕ್ತವೂ ಆದ ಕಾರ್ಯವನ್ನು ನೆರವೇರಿಸಿ ಕೃತಾರ್ಥರಾಗಿದ್ದಾರೆ. ಸನಾತನ ಸಂಸ್ಕೃತಿಪ್ರೇಮಿಗಳಾದ ಕನ್ನಡಿಗರ ಹೃದಯದಲ್ಲಿ ಅವರು ಸದಾಕಾಲವೂ ನೆಲೆಸಿರುತ್ತಾರೆ. – ಡಾ. ಕೆ. ಅನಂತರಾಮು, ಮೈಸೂರು




ಎ. ಮುರಳೀಧರ

## ಎಂಟನೆಯ ಸ್ಕಂಧ

ಒಮ್ಮೆ ಇಂದ್ರನು ದೈತ್ಯರ ಮೇಲೆ ನಡೆದ ಯುದ್ಧದ ಗೆಲುವಿನ ಹರ್ಷದಿಂದ ಮದೋನ್ಮತ್ತನಾಗಿ, ಅಟ್ಟಹಾಸದಿಂದ ಐರಾವತವನ್ನೇರಿ, ಮೆರವಣಿಗೆ ಹೊರಟನು. ದೂರ್ವಾಸ ಮುನಿಗಳು ಈ ಮೆರವಣಿಗೆಗೆ ಎದುರಾಗಿ ಬಂದರು. ಅವರು ಬೆಳಗಿನ ಜಾವದ ಸ್ನಾನ ಸಂಧ್ಯಾವಂದನೆಗಳನ್ನು ಮುಗಿಸಿ ಪಾರ್ವತಿ ಪರಮೇಶ್ವರರಿಗೆ ಅರ್ಪಿಸಿದ ಪುಷ್ಪಮಾಲೆಯನ್ನು ಹಿಡಿದುಕೊಂಡು ದಾರಿಯಲ್ಲಿ ಬರುತ್ತಿದ್ದರು. ಈ ಪುಷ್ಪಮಾಲೆಯ ಪ್ರಸಾದವು ಇಂದ್ರನಿಗೆ ಅರ್ಹವೆಂದು ತೀರ್ಮಾನಿಸಿ ಅದನ್ನು ಇಂದ್ರನಿಗೆ ಕೊಟ್ಟರು. ಅಹಂಕಾರದಿಂದ ಮತ್ತನಾದ ಇಂದ್ರನು ಅದನ್ನು ಸ್ವೀಕರಿಸಿಯೂ, ತಾನು ಧರಿಸದೆ ತನ್ನ ಆನೆಗೆ ಹಾಕಿದನು. ದೇವರ ಪ್ರಸಾದವನ್ನು ತಾನು ಧರಿಸದೆ ಐರಾವತಕ್ಕೆ ಹಾಕಿದ್ದನ್ನು ಕಂಡು ದೂರ್ವಾಸರು ಕೋಪಗೊಂಡರು. ಆನೆಯು ಆ ಹೂವಿನ ಮಾಲೆಯನ್ನು ಕಿತ್ತೆಸೆದು ತನ್ನ ಕಾಲಿನಿಂದ ತುಳಿದುಹಾಕಿತು. ಇದರಿಂದ ಮತ್ತೂ ಕ್ರೋಧಗೊಂಡ ದೂರ್ವಾಸರು, "ಎಲೈ ಮದಾಂಧ ಇಂದ್ರನೆ, ರಾಜ್ಯಭ್ರಷ್ಟನಾಗು" ಎಂದು ಶಾಪಕೊಟ್ಟರು.

ದೂರ್ವಾಸರ ಶಾಪದ ಫಲವೋ ಎಂಬಂತೆ, ಕೆಲವೇ ದಿನಗಳಲ್ಲಿ ದೈತ್ಯರು ಇಂದ್ರನ ರಾಜಧಾನಿಯನ್ನು ಮತ್ತೊಮ್ಮೆ ಮುತ್ತಿಗೆ ಹಾಕಿದರು. ತ್ರಿಲೋಕಗಳು ಇಂದ್ರನ ಕೈತಪ್ಪಿದವು. ಭೂಲೋಕದಲ್ಲಿ ಯಜ್ಞಯಾಗಾದಿಗಳು ನಡೆಯದೆ ದೇವತೆಗಳ ಶಕ್ತಿ ಕುಂದತೊಡಗಿತು. ದೇವತೆಗಳು ಏನೂ ಮಾಡಲಾಗದೆ ಹತಾಶರಾದರು. ಕೊನೆಗೆ ಬ್ರಹ್ಮದೇವರನ್ನು ಮುಂದಿಟ್ಟುಕೊಂಡು ವಿಷ್ಣುವನ್ನು ಹೀಗೆ ಪ್ರಾರ್ಥಿಸಿದರು: "ಹೇ ದೇವಾದಿದೇವ, ಎಲ್ಲದಕ್ಕೂ ಕಾರಣನಾದ ನೀನು ದಿವ್ಯಮಂಗಳಕರನಾಗಿ ನಮ್ಮ ಮೇಲೆ ಕರುಣೆ ತೋರು. ನಮಗೆ ಬಂದಿರುವ ದುಃಖವನ್ನು ಬಗೆಹರಿಸು." ಶ್ರೀಹರಿಯು ಸೂರ್ಯಪ್ರಕಾಶಮಾನವಾದ ತನ್ನ ದಿವ್ಯತೇಜಸ್ಸಿನಿಂದ ಕೇವಲ ಬ್ರಹ್ಮ ರುದ್ರಾದಿಗಳಿಗೆ ಮಾತ್ರ ಗೋಚರನಾದನು. "ಎಲೈ ದೇವತೆಗಳೇ, ನಿಮ್ಮ ಹಿತಕ್ಕಾಗಿಯೇ ಈಗ ನೀವು ದಾನವರೊಂದಿಗೆ ಸೇರಿಕೊಂಡು ಸಂಧಿ ಮಾಡಿಕೊಳ್ಳಿರಿ. ಲೋಕದಲ್ಲಿ ದೊರಕುವ ಸಕಲ ಗಿಡ, ಬಳ್ಳಿ, ಔಷಧಿ, ಹುಲ್ಲುಗರಿಕೆ ಇತ್ಯಾದಿಗಳನ್ನು ಸಮುದ್ರಕ್ಕೆ ಹಾಕಿ, ಮಂದರಪರ್ವತವನ್ನು ಸಮುದ್ರದಲ್ಲಿಟ್ಟು, ವಾಸುಕಿಯನ್ನು (ಆದಿಶೇಷ) ಪರ್ವತಕ್ಕೆ ಕಟ್ಟಿ, ಸಮುದ್ರವನ್ನು ಮಥಿಸಬೇಕು. ಆಗ ಮೊದಲು ಹಾಲಾಹಲ ಬರುತ್ತದೆ. ನಂತರ ಅನೇಕ ವಸ್ತುಗಳು ಬರುತ್ತವೆ. ಕಡೆಯಲ್ಲಿ ಅಮೃತವು ಬರುತ್ತದೆ. ಆ ಅಮೃತವೇ ದೇವತೆಗಳಿಗೆ ತೇಜಸ್ಸು, ರಾಜ್ಯೈಶ್ವರ್ಯ ಮತ್ತು ಸಕಲಭಾಗ್ಯಗಳನ್ನು ಪೂರೈಸುತ್ತದೆ" ಎಂದು ಹೇಳಿ ಅದೃಶ್ಯನಾದನು. ನಂತರ ಇಂದ್ರನು ಬ್ರಹ್ಮ ರುದ್ರಾದಿಗಳ ಅಪ್ಪಣೆಯಂತೆ, ಸಮುದ್ರ ಮಥನಕ್ಕೆ ದೈತ್ಯರ ಸಹಾಯ ಪಡೆಯಲು ದೈತ್ಯ ಚಕ್ರವರ್ತಿಯಾದ ಬಲಿಯ ಬಳಿಗೆ ಸಂಧಿಗಾಗಿ ಹೋದನು. ಇಬ್ಬರೂ ಅಮೃತವನ್ನು ಪರಸ್ಪರ ಹಂಚಿಕೊಳ್ಳಲು ಒಪ್ಪಿಕೊಂಡು, ಸಮುದ್ರಮಥನಕ್ಕೆ ಮುಂದಾದರು. ದೈತ್ಯರು ಮತ್ತು ದೇವತೆಗಳು ಮಂದರ ಪರ್ವತವನ್ನು ತಂದು ಅದಕ್ಕೆ ವಾಸುಕಿಯನ್ನು ಕಟ್ಟಿ, ಸಮುದ್ರವನ್ನು ಕಡೆಯಲು ಆರಂಭಿಸಿದರು.

ಸಮುದ್ರ ಮಥನವು ಒಂದೆರಡು ಸುತ್ತು ಬರುವುದರೊಳಗೆ, ಪರ್ವತಕ್ಕೆ ಆಧಾರವಿಲ್ಲದೆ ಕುಸಿಯಲಾರಂಭಿಸಿತು. ಎಲ್ಲರೂ ಕಂಗಾಲಾದರು. ಶ್ರೀಹರಿಯು ಕೂರ್ಮಾವತಾರವನ್ನೆತ್ತಿ ಪರ್ವತವು ಕುಸಿಯದಂತೆ ತಡೆದನು. ಇದಾಗಿ ಕೆಲ ಸಮಯದಲ್ಲಿಯೇ ವಾಸುಕಿಯು ಸುಸ್ತಾಗಿ ಏದುಸಿರುಬಿಡಲಾರಂಭಿಸಿದನು. ಆತನ ಬಾಯಿಂದ ಹೊರಟ ಅಗ್ನಿಜ್ವಾಲೆಗೆ ಮುಖಭಾಗದಲ್ಲಿ ಇದ್ದ ದೈತ್ಯರು ಕಂಗೆಟ್ಟರು. ಸ್ವಲ್ಪ ಹೊತ್ತಿನಲ್ಲೇ ವಾಯುದೇವನು ಸಮುದ್ರದಲ್ಲಿ ತಂಪಾದ ಗಾಳಿಯನ್ನು ಬೀಸಿದನು. ಸ್ವಲ್ಪ ದಣಿವಾರಿಸಿಕೊಂಡ ದೇವತೆಗಳು ಮತ್ತು ದೈತ್ಯರು ಮತ್ತೆ ಸೇರಿಕೊಂಡು ಸಮುದ್ರವನ್ನು ಕಡೆಯಲು ಆರಂಭಿಸಿದರು.

ಸ್ವಲ್ಪಹೊತ್ತಾದ ನಂತರ ಸಮುದ್ರಮಧ್ಯದಿಂದ ಹಾಲಾಹಲ ವೆಂಬ ಅತ್ಯುಗ್ರ ವಿಷವು ಹುಟ್ಟಿ ವ್ಯಾಪಿಸತೊಡಗಿತು. ಇದರ ಜ್ವಾಲೆಯನ್ನು ಸಹಿಸಲಾಗದೆ ದೇವತೆಗಳು, ದಾನವರು, ಪ್ರಾಣಿ, ಪಕ್ಷಿ ಸಂಕುಲಗಳು ಕಂಗೆಟ್ಟು ಹೋದರು. ಈ ಆಪತ್ತನ್ನು



ಪರಿಹರಿಸಲು ಮಹಾದೇವ ಶಿವನೇ ಸಮರ್ಥನೆಂದು ತಿಳಿದು ದೇವತೆಗಳು ದೈತ್ಯರು ಅವನನ್ನು ಪ್ರಾರ್ಥಿಸಿದರು. ಅವರ ಪ್ರಾರ್ಥನೆಗೆ ಸ್ಪಂದಿಸಿದ ರುದ್ರನು ಹಾಲಾಹಲವನ್ನು ಕುಡಿದನು. ಆ ಹಾಲಾಹಲವು ರುದ್ರನ ಶರೀರಕ್ಕಿಳಿಯದಂತೆ ಪಾರ್ವತೀದೇವಿಯು ರುದ್ರನ ಗಂಟಲನ್ನು ಒತ್ತಿ ಹಿಡಿದು, ಅದನ್ನು ಅಲ್ಲೇ ತಡೆದಳು. ಅಂದಿನಿಂದ ರುದ್ರನು 'ನೀಲಕಂಠ'ನೆಂದೇ ಪ್ರಖ್ಯಾತನಾದನು.

ದೇವದಾನವರು ಸಮುದ್ರವನ್ನು ಮತ್ತೆ ಮಥಿಸತೊಡಗಿದರು. ಈ ಬಾರಿ ಮೊದಲು ಕಾಮಧೇನು ಜನಿಸಿತು. ಅದನ್ನು ಋಷಿಮುನಿಗಳು ಯಜ್ಞಕಾರ್ಯಕ್ಕಾಗಿ ಸ್ವೀಕರಿಸಿದರು. ಮುಂದೆ ಶುಭ್ರವಾದ ಅಶ್ವವು ಜನಿಸಿತು. ಅದನ್ನು ಬಲಿ ಚಕ್ರವರ್ತಿಯು ಪಡೆದುಕೊಂಡನು. ಮುಂದೆ ಐರಾವತವೆಂಬ ಬಿಳಿ ಆನೆಯು ಬಂದಿತು. ಅದರ ಸೌಂದರ್ಯ ಮತ್ತು ಗಾಂಭೀರ್ಯತೆಗಳಿಗೆ ಮಾರುಹೋಗಿ ಇಂದ್ರನು ಅದನ್ನು ಸ್ವೀಕರಿಸಿದನು. ಮುಂದೆ ಅಷ್ಟದಿಗ್ಗಜಗಳು ಎಂಬ ಎಂಟು ಹೆಣ್ಣಾನೆಗಳು ಹಾಗೂ ಕೌಸ್ತುಭ ಮಣಿಯು ಹೊರಬಂದವು. ಕೌಸ್ತುಭಮಣಿಯನ್ನು ವಿಷ್ಣುವು ತನ್ನ ಕಂಠಹಾರವಾಗಿ ಸ್ವೀಕರಿಸಿದನು. ಮುಂದೆ ಸ್ವರ್ಗಕ್ಕೆ ಅಲಂಕಾರಪ್ರಾಯವಾದ ಪಾರಿಜಾತ ಮತ್ತು ಕಲ್ಪವೃಕ್ಷಗಳು ಹುಟ್ಟಿಕೊಂಡವು. ನಂತರ ಸಾಕ್ಷಾತ್ ಮಹಾಲಕ್ಷ್ಮಿಯೇ ಉದಯಿಸಿಬಂದಳು. ಅವಳು ಸರ್ವೋತ್ತಮನಾದ ಶ್ರೀಹರಿ ಯನ್ನೇ ಪತಿಯೆಂದು ಸ್ವೀಕರಿಸಿ ಆತನ ವೃಕ್ಷಸ್ಥಳದಲ್ಲಿ ನೆಲೆಸಿದಳು. ನಂತರ ಚಂದ್ರನು ಬಂದನು. ತರುವಾಯ ವಾರುಣಿಕನ್ಯೆ ಬಂದಾಗ ಅವಳನ್ನು ದೈತ್ಯರು ಸ್ವೀಕರಿಸಿದರು.

ಕಟ್ಟಕಡೆಯಲ್ಲಿ ಪರಮಾತ್ಮನೇ ಧನ್ವಂತರಿಯ ರೂಪದಲ್ಲಿ ಮಂದಸ್ಮಿತನಾಗಿ ಅಮೃತ ಕಲಶವನ್ನು ಹಿಡಿದುಕೊಂಡು ಅವತರಿ ಸಿದನು. ಆ ಅಮೃತವನ್ನು ದೈತ್ಯರು ಕಸಿದುಕೊಂಡು ಓಡಿದರು. ದೇವತೆಗಳ ಸಂಕಷ್ಟವನ್ನು ನೋಡಲಾಗದ ಹರಿಯು ಮೋಹಿನಿ ರೂಪವನ್ನು ತಾಳಿದನು. ಆಕೆಯ ರೂಪಯೌವನಗಳನ್ನು ಕಂಡು ಮರುಳಾದ ದಾನವರು, ಅಮೃತವನ್ನು ಸಮನಾಗಿ ಹಂಚಬೇಕೆಂದು ಆಕೆಯ ಮೊರೆಹೊಕ್ಕರು. ಆಕೆಯು ದೇವ – ದಾನವರನ್ನು ಸಾಲಾಗಿ ಕೂರಿಸಿದಳು. ತನ್ನ ಹಾವಭಾವಗಳನ್ನು ದಾನವರಿಗೆ ತೋರಿಸಿ ಅವರನ್ನು ಮರಳುಮಾಡುತ್ತ, ಅಮೃತವನ್ನು ದೇವತೆಗಳಿಗೆ ನೀಡಿದಳು. ದೈತ್ಯರಿಗೆ ಅಮೃತವು ಸಿಕ್ಕಲಿಲ್ಲ.

**ವಾಮನವಾತಾರ:** ಮಾಯಾವಿಯಾದ ಶ್ರೀಹರಿಯು ತಮ್ಮನ್ನು ಮೋಸಗೊಳಿಸಿ ದೇವತೆಗಳಿಗೆ ಅಮೃತ ಕುಡಿಸಿದ್ದರಿಂದ ದಾನವರು ಕುಪಿತರಾದರು. ಮುಂದೆ ನಡೆದ ದೇವದಾನವರ ಯುದ್ಧದಲ್ಲಿ ದಾನವರು ಬಹುತೇಕ ಸೋತುಹೋಗುತ್ತಿದ್ದರು. ಆದರೆ, ದೈತ್ಯರ ಗುರುವಾದ ಶುಕ್ರಾಚಾರ್ಯರಿಗೆ ಮೃತಸಂಜೀವಿನಿ ವಿದ್ಯೆಯು ತಿಳಿದಿತ್ತು. ಅದರಂತೆ, ಮರಣಗೊಂಡ ದೈತ್ಯರನ್ನು ಪುನಃ ಜೀವಿಸುವಂತೆ ಮಾಡಿ ಯುದ್ಧಕ್ಕೆ ಹುರಿದುಂಬಿಸಿದರು. ಇದರಿಂದ, ದೈತ್ಯರ ರಾಜನಾದ ಬಲಿಯು ತುಂಬಾ ಸಂತಸಗೊಂಡು ಶುಕ್ರಾಚಾರ್ಯರನ್ನೂ ಋಷಿಮುನಿಗಳನ್ನೂ ಆದರಿಸಿ ಸತ್ಕರಿಸಿದನು. ಇದರಿಂದ ಸಂತುಷ್ಟರಾದ ಅವರೆಲ್ಲರೂ ಬಲಿಗೆ ತಮ್ಮ ಪುಣ್ಯವನ್ನು ಧಾರೆಯೆರೆದರು. ಇದಲ್ಲದೆ ಕುಲಪುರೋಹಿತರಾದ ಶುಕ್ರಾಚಾರ್ಯರು ಇಂದ್ರನನ್ನು ಮಣಿಸಿ ಬಲಿಯನ್ನು ಸ್ವರ್ಗಾಧಿಪತಿಯನ್ನಾಗಿ ಮಾಡುವ ಮಹತ್ವಾಕಾಂಕ್ಷೆಯಿಂದ, 'ವಿಶ್ವಜಿತ್' ಎಂಬ ಯಾಗವನ್ನು ಬಲಿಯಿಂದ ವೇದೋಕ್ತವಾಗಿ ಮಾಡಿಸಿದರು. ಈ ಯಾಗದಿಂದ ಅಪಾರ ಬಲವನ್ನು ಪಡೆದುಕೊಂಡ ಬಲಿಯು ಇಂದ್ರನನ್ನು ಸದೆಬಡಿದು ತಾನೇ ಸ್ವರ್ಗಕ್ಕೆ ಅಧಿಪತಿಯಾದನು.

ಇದೇ ಸಮಯದಲ್ಲಿ, ಕಶ್ಯಪರ ಪತ್ನಿ ಅದಿತಿ ದೇವಿಯು ತನ್ನ ಮಕ್ಕಳಾದ ಇಂದ್ರಾದಿ ದೇವತೆಗಳಿಗೆ ಆದ ಅನ್ಯಾಯವನ್ನು ಕಂಡು

ಮರುಗಿದಳು. ಪತಿಯ ಅಪ್ಪಣೆ ಪಡೆದು ಹದಿನೈದು ದಿವಸದವರೆಗೆ ತಪೋವ್ರತವನ್ನು ಮಾಡಿದಳು. ಅವಳ ಭಕ್ತಿಗೆ ಮೆಚ್ಚಿದ ಶ್ರೀಹರಿಯು, "ನಾನೇ ನಿನ್ನ ಉದರದಲ್ಲಿ ಜನಿಸಿ ಬರುತ್ತೇನೆ" ಎಂದು ಹೇಳಿ ಅದೃಶ್ಯನಾದನು. ಕೆಲದಿನಗಳಲ್ಲಿಯೇ ಅದಿತಿ ದೇವಿಯು ಗರ್ಭಧರಿಸಿದಳು. ಇದು ಬ್ರಹ್ಮದೇವರಿಗೆ ತಿಳಿಯಿತು. ಅವರು ಭೂಲೋಕಕ್ಕೆ ಇಳಿದುಬಂದು ಗರ್ಭಸ್ಥನಾದ ಭಗವಂತನ ಸ್ತೋತ್ರ ಮಾಡಿದರು. ಪರಮಾತ್ಮನು ಅದಿತಿದೇವಿಗೆ ಹುಟ್ಟಿದನು. ಒಡನೇ ೫ – ೬ ವರ್ಷದ ಬಾಲಕನಂತೆ ಬೆಳೆದುಬಿಟ್ಟನು. ದೇವತೆಗಳ ಗುರುಗಳಾದ ಬ್ರಹಸ್ಪತಿಗಳು ಅವನಿಗೆ ಉಪನಯನ ಮಾಡಿಸಿದರು. ಸಾಕ್ಷಾತ್ ಸೂರ್ಯದೇವನೇ ಈ ಮಗುವಿಗೆ 'ವಾಮನ' ನೆಂದು ನಾಮಕರಣ ಮಾಡಿದನು. ಅದಿತಿದೇವಿಯು ಕೌಪೀನವನ್ನೂ, ಕುಬೇರನು ಭಿಕ್ಷಾಪಾತ್ರೆಯನ್ನೂ ಕೊಟ್ಟರು. ಪಾರ್ವತಿ ದೇವಿಯೇ ಮೊದಲ ಮಾತೃಭಿಕ್ಷೆಯನ್ನು ನೀಡಿದಳು.

ತದನಂತರ ವಾಮನನು ಬಲಿಯು ಯಾಗ ಮಾಡುತ್ತಿದ್ದ ಯಜ್ಞಮಂಟಪಕ್ಕೆ ಬಂದನು. ಸೂರ್ಯನಂತೆ ಪ್ರಕಾಶಿಸುತ್ತಿದ್ದ ಆ ಬಾಲಬ್ರಹ್ಮಚಾರಿಯನ್ನು ಕಂಡಕೂಡಲೇ ಬಲಿಚಕ್ರವರ್ತಿಯು ಭಕ್ತಿಯಿಂದ ನಮಸ್ಕರಿಸಿ ಸತ್ಕರಿಸಿದನು. "ಎಲೈ ವಟುವೇ, ನನ್ನಿಂದ ನಿಮಗೆ ಏನು ಬೇಕು? ಕೇಳಿ. ಸಂತೋಷದಿಂದ ದಾನ ಮಾಡುವೆನು" ಎಂದನು. ಆ ಬಾಲವಟುವು, "ನೀನು ಪ್ರಹ್ಲಾದನ ಮೊಮ್ಮಗನಾಗಿರುವೆ. ನೀತಿವಂತನೂ, ಸತ್ಯವಂತನೂ ಆಗಿರುವೆ. ನಿನ್ನಿಂದ ನನಗೆ ನನ್ನ ಪಾದದ ಮೂರು ಅಳತೆ ಭೂಮಿ ಬೇಕು" ಎಂದನು. ಅದಕ್ಕೆ ಬಲಿಯು ಒಪ್ಪಿಗೆ ಸೂಚಿಸಿದನು. ಇದನ್ನು ಕಂಡು ದಾನವ ಗುರುಗಳಾದ ಶುಕ್ರಾಚಾರ್ಯರು ಹೌಹಾರಿ, "ಈ ವಟುವು ವಿಷ್ಣುವಿನ ಅವತಾರ. ನಿನ್ನನ್ನು ಮೋಸಗೊಳಿಸಲು ಬಂದಿದ್ದಾನೆ" ಎಂದು ಬಲಿಯನ್ನು ಎಚ್ಚರಿಸಿದರು. ಆದರೆ ಬಲಿಯು ತಾನು ಕೊಟ್ಟ ಮಾತಿನ ಹಾಗೆಯೇ ನಡೆದುಕೊಂಡನು. ಬಾಲಕನ ಪಾದವನ್ನು ತೊಳೆದು ಅದನ್ನು ಶಿರದಲ್ಲಿ ಧರಿಸಿ, "ನೀವು ಕೇಳಿದ ಮೂರು ಪಾದದ ಭೂಮಿಯನ್ನು ಕೊಟ್ಟಿದ್ದೇನೆ" ಎಂದನು.

ಕೂಡಲೇ ವಾಮನನು ಬೃಹದಾಕಾರವಾಗಿ ಬೆಳೆದನು. ಒಂದು ಪಾದದಲ್ಲಿ ಮೇಲೆ ಕೆಳಗೆ ಏಳೂ ಲೋಕಗಳನ್ನು ವ್ಯಾಪಿಸಿಕೊಂಡು ಹೆಜ್ಜೆಯಿಟ್ಟನು. ಎರಡನೇ ಹೆಜ್ಜೆಯಿಂದ ಭೂಲೋಕ ಇನ್ನಿತರ ಸಮಸ್ತ ಲೋಕವನ್ನೂ ಅಳೆದನು. ಇನ್ನು ವಾಮನನು, "ಮೂರನೇ ಪಾದವನ್ನು ಎಲ್ಲಿಡಲಿ?" ಎಂದು ಬಲಿಯನ್ನು ಕೇಳಿದನು. ಬಲಿ ಚಕ್ರವರ್ತಿಯು ಶ್ರದ್ಧಾಭಕ್ತಿಯಿಂದ ತನ್ನ ತಲೆಯನ್ನೇ ತೋರಿಸಿದನು. ಅಷ್ಟರಲ್ಲಿ ಪ್ರಹ್ಲಾದನು ಬಂದು, "ನನ್ನ ಮೊಮ್ಮಗನನ್ನು ಉದ್ಧರಿಸಬೇಕು" ಎಂದು ಭಗವಂತನನ್ನು ಕೇಳಿಕೊಂಡನು. ಅದಕ್ಕೆ ವಾಮನನು, "ಬಲಿ ಚಕ್ರವರ್ತಿಯ ಮೇಲೆ ನನ್ನ ಪೂರ್ಣ ಅನುಗ್ರಹವಿದೆ. ಬಲಿಚಕ್ರವರ್ತಿಯೇ, ನೀನು ಪಾತಾಳ ಲೋಕದಲ್ಲಿರು. ನನ್ನ ಸುದರ್ಶನ ಚಕ್ರವು ಸದಾ ನಿನ್ನನ್ನು ಕಾಯುತ್ತಿರುವುದು. ನಾನೂ ಸಹ ಒಂದು ರೂಪದಲ್ಲಿ ನಿನ್ನ ಮನೆಯ ಬಾಗಿಲಲ್ಲಿ ನಿಂತು ನಿನಗೆ ರಕ್ಷಣೆಯನ್ನು ಮಾಡುತ್ತೇನೆ" ಎಂದನು. ಬಲಿಯು ಭಗವಂತನನ್ನು ಸ್ತುತಿಸುತ್ತಾ ಅಜ್ಜ ಪ್ರಹ್ಲಾದನೊಂದಿಗೆ ಪಾತಳ ಲೋಕಕ್ಕೆ ಹೋದನು. ಇಂದಿಗೂ ಬಲಿಯು ಚಿರಂಜೀವಿಯಾಗಿದ್ದು, ದೀಪಾವಳಿ ಹಬ್ಬದಲ್ಲಿ ಧರೆಗೆ ಬರುವನೆಂಬ ನಂಬಿಕೆ ಇದೆ. ಅದಕ್ಕೆಂದೇ ಬಲಿಪಾಡ್ಯಮಿಯಂದು ಜನರು ತಮ್ಮ ಮನೆಯ ಮುಂದಿನ ಆವರಣದಲ್ಲಿ ಹೂವುಗಳಿಂದ ವಿಶೇಷವಾದ ಅಲಂಕಾರ ಮಾಡಿ, ದೀಪ ಹಚ್ಚಿ ಬಲಿಯನ್ನು ಸ್ವಾಗತಿಸಿ ಪೂಜಿಸುವ ಪದ್ಧತಿ ಇದೆ.

**ಮತ್ಸ್ಯಾವತಾರ:** ಹಿಂದೆ ದ್ರಾವಿಡ ದೇಶದಲ್ಲಿ ಸತ್ಯವ್ರತನೆಂಬ ರಾಜನು ಆಳುತ್ತಿದ್ದನು. ಅವನು ಶ್ರೀಹರಿಯ ಭಕ್ತನಾಗಿದ್ದನು. ಆತನು ಅರಣ್ಯಕ್ಕೆ ತೆರಳಿ ನದೀತೀರದಲ್ಲಿ ಪರ್ಣಕುಟೀರವನ್ನು ಕಟ್ಟಿಕೊಂಡು ತಪಸ್ಸು ಮಾಡುತ್ತಿದ್ದನು. ಒಮ್ಮೆ ಸತ್ಯವ್ರತನು ಸ್ನಾನ ಮಾಡಿ ಅರ್ಘ್ಯ ಕೊಡುವಾಗ ಬೊಗಸೆಯಲ್ಲಿ ಮೀನೊಂದು ಕಂಡುಬಂದಿತು. ನೀರನ್ನು ಚೆಲ್ಲಬೇಕೆನ್ನುವಷ್ಟರಲ್ಲಿ ಅದೇ ಮಾತನಾಡಿ, "ರಾಜನೆ, ಈ ನದಿಯಲ್ಲಿರುವ ದೊಡ್ಡ ದೊಡ್ಡ ಮೀನುಗಳು ನನ್ನನ್ನು ತಿನ್ನುತ್ತವೆ. ನನ್ನನ್ನು ರಕ್ಷಿಸು" ಎಂದಿತು. ರಾಜನು ಕರುಣೆಯಿಂದ ಆ ಮೀನನ್ನು ತನ್ನ ಕಮಂಡಲದಲ್ಲಿಟ್ಟನು. ಮರುದಿವಸ ನೋಡಲು ಕಮಂಡಲವನ್ನೂ ಮೀರಿ ಅದರ ದೇಹ ಬೆಳೆದಿತ್ತು. ನಂತರ ರಾಜನು ಅದನ್ನು ಸ್ಥಳಾಂತರಿಸಿ, ಒಂದು ದೊಡ್ಡ ಪಾತ್ರೆಯಲ್ಲಿ ಇಟ್ಟನು. ಮರುದಿವಸ ನೋಡಿದಾಗ ಆ ಮೀನು ಇನ್ನಷ್ಟು ಬೆಳೆದಿತ್ತು. ರಾಜನು ಮತ್ತೂ ಕರುಣೆಯಿಂದ ಅದನ್ನು ಸರೋವರದಲ್ಲಿ ಬಿಟ್ಟನು. ಮಾರನೆ ದಿವಸ ಅದೇ ಮೀನಿಗೆ ಸರೋವರದ ಸ್ಥಳವೂ ಸಾಕಾಗದೆ ನದಿಯಲ್ಲಿ ಬಿಟ್ಟನು. ಮುಂದಿನ ದಿನ ಅದೂ ಸಾಕಾಗದೆ ಮೀನನ್ನು ಸಮುದ್ರಕ್ಕೆ ಬಿಟ್ಟನು. ಆಗ ಮೀನು, "ರಾಜನೆ, ನೀನು ನನ್ನನ್ನು ತಿಮಿಂಗಿಲಗಳಿರುವ ಜಾಗಕ್ಕೆ ತಂದುಬಿಟ್ಟೆಯಲ್ಲ" ಎಂದಿತು. ಆಗ ಸತ್ಯವ್ರತನು, "ಕೆಲವೇ ದಿವಸಗಳಲ್ಲಿ ಈ ರೀತಿಯಾಗಿ ಬೆಳೆದಿರುವುದನ್ನು ನೋಡಿದರೆ ನೀನು ಸಾಮಾನ್ಯ ಮೀನಲ್ಲ, ನೀನು ಯಾರು? ನೀನು ಭಗವಂತನ ಸ್ವರೂಪವೇ?" ಎಂದು ಕೇಳಿಕೊಂಡನು.

ಸಂತಸಗೊಂಡ ಮೀನು, "ಹೌದು, ಮತ್ಸ್ಯಾವತಾರಿಯಾದ ಭಗವಂತನೇ ನಾನು. ಇಂದಿನಿಂದ ಏಳು ದಿನಗಳೊಳಗೆ ಜಲ ಪ್ರಳಯವಾಗುತ್ತದೆ. ಆಗ ಇಡೀ ಭೂಮಂಡಲವೆಲ್ಲ ಮುಳುಗುವುದು. ಆ ಜಲದಲ್ಲಿ ದೊಡ್ಡ ನಾವೆಯೊಂದು ತೇಲಿ ಬರುವುದು. ಆ ನಾವೆಯಲ್ಲಿ ಹಾಕಲು ಭೂಮಿಯಲ್ಲಿ ಬೆಳೆದಿರುವ ಎಲ್ಲ ರೀತಿಯ ವನಸ್ಪತಿಗಳನ್ನೂ ಔಷಧಿಗಳನ್ನೂ ಈಗಲೇ ನೀನು ಸಂಗ್ರಹಿಸು. ತೆರೆಗಳ ಹೊಡೆತಕ್ಕೆ ಆ ನಾವೆಯು ಡೋಲಾಯಮಾನವಾಗುವುದು. ಆದರೂ ನೀನು ಹೆದರಬೇಡ. ನಾನು ಇದೇ ರೂಪದಿಂದ ಬರುವೆನು. ಸರ್ಪವೊಂದರ ಒಂದು ತುದಿಯನ್ನು ನಾವೆಗೂ, ಮತ್ತೊಂದು ತುದಿಯನ್ನು ನನ್ನ ಕೋಡಿಗೂ ಕಟ್ಟು. ಆಗ ನಾವೆಯು ಸ್ಥಿರವಾಗಿ ನಿಲ್ಲುವುದು. ಆ ಸಮಯದಲ್ಲಿ ನಿನಗೆ ಅಧ್ಯಾತ್ಮವಿದ್ಯೆಯನ್ನು ಬೋಧಿಸುತ್ತೇನೆ" ಎಂದು ಅದೃಶ್ಯವಾಯಿತು. ಅದರಂತೆ, ಸಮುದ್ರವು ಏಳು ದಿವಸಗಳಾದ ಮೇಲೆ ಉಕ್ಕೇರಿತು. ಅದರೊಂದಿಗೆ ನಾವೆಯೂ ಕಾಣಿಸಿಕೊಂಡಿತು. ಅದರ ಜೊತೆಯಲ್ಲೇ ಮತ್ಸ್ಯಾವತಾರಿಯಾದ ಭಗವಂತನೂ ಬಂದು, ಸತ್ಯವ್ರತನಿಗೆ ಪ್ರಕೃತಿಯ ಲಕ್ಷಣ, ಆತ್ಮಜ್ಞಾನ, ಭಗವತ್ಸ್ವರೂಪ ಇತ್ಯಾದಿಗಳನ್ನು ಬೋಧಿಸಿದನು. ಇದೇ ಮತ್ಸ್ಯಪುರಾಣ ಎನ್ನಿಸಿ ಕೊಂಡಿದೆ. ⌘

# ಛಾಯಾಚಿತ್ರಗಳಲ್ಲಿ ಸ್ವಾಮಿ ವಿವೇಕಾನಂದರು

ಕೆ. ಆರ್. ಮೋಹನ್



**ಛಾಯಾಚಿತ್ರ ೯೧**

ಈ ಚಿತ್ರ ಮತ್ತು ಛಾಯಾಚಿತ್ರ ೯೨ – ಇವೆರಡೂ ಸುಮಾರು ಒಂದು ದಶಕದ ಹಿಂದೆ ದಕ್ಷಿಣ ಕ್ಯಾಲಿಫೋರ್ನಿಯಾದ ಹಾಲಿವುಡ್ ವೇದಾಂತ ಸೊಸೈಟಿಯ ಪತ್ರಾಗಾರದಲ್ಲಿ ದೊರೆತವು. ಈ ಚಿತ್ರವು ಮೊದಲ ಬಾರಿಗೆ Vedanta Voice ಪತ್ರಿಕೆಯ ಜೂನ್ ೨೦೦೨ರ ಸಂಚಿಕೆಯಲ್ಲಿ ಪ್ರಕಟವಾಯಿತು. ಚಿತ್ರ ೯೧ ಮತ್ತು ೯೨ – ಇವೆರಡೂ ಛಾಯಾಚಿತ್ರಗಳನ್ನು ೧೯೦೦ ರಲ್ಲಿ ಸ್ಯಾನ್‌ಫ್ರಾನ್ಸಿಸ್ಕೋ ನಗರದಲ್ಲಿ ತೆಗೆಯಲಾಯಿತು.


ಛಾಯಾಚಿತ್ರ ೯೧

ಸ್ವಾಮೀಜಿಯವರ ಶಿಷ್ಯೆಯಾದ ಇಡಾ ಅನ್ಸೆಲ್ ವೇದಾಂತ ಸೊಸೈಟಿಗೆ ಈ ಫೋಟೋವನ್ನು ಕೊಡುಗೆಯಾಗಿ ಕೊಟ್ಟಳು. ಈ ಚಿತ್ರದಲ್ಲಿ ಸ್ವಾಮೀಜಿ ತುಂಬ ಆಕರ್ಷಕವಾಗಿ ಕಾಣುತ್ತಿದ್ದಾರೆ.

**ಛಾಯಾಚಿತ್ರ ೯೨**

ಚಳಿಗಾಲವಾದ್ದರಿಂದ ಈ ಚಿತ್ರದಲ್ಲಿ ಸ್ವಾಮೀಜಿ ಅದಕ್ಕೆ ತಕ್ಕನಾದ ಪೋಷಾಕನ್ನು ಧರಿಸಿದ್ದಾರೆ. ಅವರ ತೆರೆದ ಕಣ್ಣುಗಳು ಗಮನ ಸೆಳೆಯುವಂತಿವೆ. ಒಮ್ಮೆ ಸ್ವಾಮೀಜಿ ತಮ್ಮ ಪ್ರಿಯಶಿಷ್ಯೆಯಾದ ಇಡಾ ಅನ್ಸೆಲ್ ಅನ್ನು ಬೀಳ್ಕೊಡಲು ಕ್ಯಾಂಪ್ ಟೇಲರ್ ರೈಲ್ವೇ ನಿಲ್ದಾಣಕ್ಕೆ ಹೋಗಿದ್ದರು. ಆಕೆಯ ಜೊತೆ ರೈಲುನಿಲ್ದಾಣದಲ್ಲಿ ನಿಂತಿದ್ದಾಗ, ರೈಲುಗಾಡಿ ಬಂತು. ರೈಲುಗಾಡಿಯ ಚಾಲಕ ಸ್ವಾಮೀಜಿಯವರ ಭವ್ಯ ವ್ಯಕ್ತಿತ್ವವನ್ನು


ಛಾಯಾಚಿತ್ರ ೯೨

ನೋಡಿ, "ಹಲೋ! ಈ 'ಆಕಾಶ ನಾವಿಕ' ಯಾರು?" ಎಂದು ಉದ್ಗಾರ ಮಾಡಿದ. ಧಾರ್ಮಿಕ ನೇತಾರರಿಗೆ 'ಆಕಾಶ ನಾವಿಕ' ಎಂದು ಕರೆಯುವ ವಾಡಿಕೆ ಇತ್ತು. ಸ್ವಾಮೀಜಿಯವರ ಕಣ್ಣುಗಳು ಯಾವತ್ತೂ ಆಕಾಶದತ್ತ ಇರುತ್ತಿದ್ದವು ಎಂದು ಇಡಾ ಅನ್ಸೆಲ್ ಹೇಳುತ್ತಿದ್ದಳು.

**ಛಾಯಾಚಿತ್ರ ೯೩**

ಮಿಸ್. ಬ್ಲಾಂಚೆ ಪಾರ್ಟಿಂಗ್‌ಟನ್ ಎನ್ನುವವಳು ಸ್ಯಾನ್ ಫ್ರಾನ್ಸಿಸ್ಕೋ ಕ್ರಾನಿಕಲ್ ಪತ್ರಿಕೆಯ ವರದಿಗಾರ್ತಿಯಾಗಿದ್ದಳು. ಆಕೆಯು ಆ ನಗರದ ಟರ್ಕ್ ರಸ್ತೆಯಲ್ಲಿ ವಾಸವಾಗಿದ್ದ ಸ್ವಾಮೀಜಿಯವರನ್ನು ಭೇಟಿಯಾಗಿ, ತನ್ನ ಪತ್ರಿಕೆಗಾಗಿ ಸಂದರ್ಶನ ನಡೆಸಿದಳು. 'ಭಾರತದ ಒಬ್ಬ ಮಸುಕಾದ ತತ್ತ್ವಜ್ಞಾನಿ' ಎಂಬ ಶಿರೋನಾಮೆಯ ಅಡಿಯಲ್ಲಿ ಆಕೆಯ ಸಂದರ್ಶನವು ೧೯೦೦ರ ಮಾರ್ಚ್ ೧೮ರಂದು ಪ್ರಕಟವಾಯಿತು. ಅದರ ಜೊತೆಗೆ ಈ ಚಿತ್ರವೂ ಮುದ್ರಿತವಾಗಿತ್ತು. ಸ್ವಾಮೀಜಿಯವರ ಶಿಷ್ಯೆಯಾದ ಶ್ರೀಮತಿ ಹ್ಯಾನ್ಸ್‌ಬ್ರೋ ಎಂಬಾಕೆಯ ಕೋರಿಕೆಯ ಮೇರೆಗೆ, ಸ್ಯಾನ್‌ಫ್ರಾನ್ಸಿಸ್ಕೋ ನಗರದ ಬುಶ್‌ನೆಲ್ ಸ್ಟುಡಿಯೋದಲ್ಲಿ ಪರಿಣತ







ಛಾಯಾಗ್ರಾಹಕನೊಬ್ಬನು ಈ ಛಾಯಾಚಿತ್ರವನ್ನು ತೆಗೆದನು. ಹೀಗಾಗಿ ಕುಳಿತಿರುವ ಭಂಗಿಯಲ್ಲಿರುವ ಈ ಚಿತ್ರವು ಚೆನ್ನಾಗಿ ಮೂಡಿಬಂದಿದೆ.

### ಛಾಯಾಚಿತ್ರ ೯೪

ಛಾಯಾಚಿತ್ರ ೯೩ರಲ್ಲಿ ಇರುವಂತೆ, ಈ ಚಿತ್ರವನ್ನು ಕೂಡ ಬುಶ್‌ನೆಲ್ ಸ್ಟುಡಿಯೊದಲ್ಲಿಯೇ ತೆಗೆಯಲಾಯಿತು. ಈ ಚಿತ್ರದಲ್ಲಿ ಸ್ಟುಡಿಯೋ ಹಿನ್ನೆಲೆ ಕಂಡುಬರುತ್ತಿದೆ. ನಿಂತಿರುವ ಭಂಗಿಯಲ್ಲಿರುವ ಈ ಚಿತ್ರದಲ್ಲಿ ಸ್ವಾಮೀಜಿಯವರ ಭವ್ಯ ವ್ಯಕ್ತಿತ್ವವು ಎದ್ದುಕಾಣುತ್ತಿದೆ.

### ಛಾಯಾಚಿತ್ರ ೯೫

ಹಿಂದಿನ ಎರಡು ಚಿತ್ರಗಳಂತೆಯೇ, ೧೯೦೦ ಫೆಬ್ರವರಿ ತಿಂಗಳಲ್ಲಿ ಈ ಚಿತ್ರವನ್ನೂ ಸ್ಟುಡಿಯೋದಲ್ಲಿ ತೆಗೆಯಲಾಯಿತು. ಈ ಚಿತ್ರದಲ್ಲಿ ಸ್ವಾಮೀಜಿ ತುಂಬ ಆರೋಗ್ಯಕರವಾಗಿ ಕಾಣುತ್ತಾರೆ. ಆ ಸಮಯದಲ್ಲಿ ಅವರು ಮೂರು ಸಾವಿರ ಜನರು ಕೇಳುವ ರೀತಿಯಲ್ಲಿ ಗಟ್ಟಿಯಾಗಿ ಮಾತನಾಡುವಷ್ಟು ಶಕ್ತರಾಗಿದ್ದರು. ಸ್ಯಾನ್ ಫ್ರಾನ್‌ಸಿಸ್ಕೋ ಮಹಾನಗರದ 'ಗೋಲ್ಡನ್ ಗೇಟ್' ಹಾಲಿನಲ್ಲಿ ಉಪನ್ಯಾಸ ಮಾಡಿದಾಗ, ಜನರು ಕಿಕ್ಕಿರಿದು ನೆರೆದಿದ್ದರು. ಅವರ ಶಿಷ್ಯೆಯಾದ ಮಿಸೆಸ್ ಅಲ್ಲಾನ್ ಒಮ್ಮೆ ಉದ್ಗಾರ ತೆಗೆಯುತ್ತಾಳೆ: "ಸ್ವಾಮೀಜಿಯವರ ದೈಹಿಕ ಸೌಂದರ್ಯವನ್ನು ಊಹೆ ಮಾಡಲೂ ಸಾಧ್ಯವಿಲ್ಲ. ಅವರ ಮುಖ, ಅವರ ಕೈಗಳು ಅದೆಷ್ಟು ಸುಂದರವಾಗಿದ್ದವು!" ⌘





# ಸ್ವಾಮಿ ವಿವೇಕಾನಂದರು ನಿರೂಪಿಸಿದ ನೀತಿಕಥೆಗಳು



ಡಾ. ಕೆ. ಅನಂತರಾಮು

## ಕಿವಿಗೆ ಘಂಟೆಕಟ್ಟಿಕೊಂಡ ಘಂಟಾಕರ್ಣ

ಭಕ್ತಿಸಾಧನೆಯ ಪ್ರಾರಂಭದ ಹಂತದಲ್ಲಿ ಏಕದೇವರನ್ನು ಪೂಜಿಸುವ ನಿಷ್ಠೆ ಅತ್ಯಂತ ಅಗತ್ಯವಾದುದು. ಆದರೆ ಆ ಏಕನಿಷ್ಠೆಯನ್ನು ಮುಂದುಮಾಡಿಕೊಂಡು ಇತರರನ್ನು ನಿರಾಕರಿಸುವುದು, ಇತರ ದೇವರುಗಳನ್ನು ಪೂಜಿಸುವವರನ್ನು ಹಿಂಸಿಸುವುದು ಸಲ್ಲದು. 'ನಾನು ಪೂಜಿಸುವ ದೇವರೇ ಶ್ರೇಷ್ಠ' ಎಂಬ ಹಠಮಾರಿತನಕ್ಕೆ ಬಿದ್ದು, ಅನ್ಯರನ್ನು ದ್ವೇಷಿಸತೊಡಗಿದರೆ, ಅದು ಮತಾಂಧತೆ ಎನಿಸುತ್ತದೆ. ಮತೀಯ ಭಾವನೆಗಳಿಂದ ಕುರುಡರಂತಾಗಿಬಿಡುವುದು ಎಂಬುದು ಮತಾಂಧತೆ ಎಂಬುದಕ್ಕಿರುವ ಅರ್ಥ. ಅದನ್ನೇ ಮತಭ್ರಾಂತಿ ಎಂದೂ ಕರೆಯುತ್ತಾರೆ. ಅಪಕ್ವ ಮನಸ್ಸಿನ ಸಾಮಾನ್ಯ ವ್ಯಕ್ತಿಯು, ಇನ್ನೊಬ್ಬರನ್ನು ದ್ವೇಷಿಸದೆ ಒಬ್ಬರನ್ನು ಪ್ರೀತಿಸಲಾರನು ಎಂದಾಗ ಅದು ಧರ್ಮದಲ್ಲಿ ಮತಾಂಧತೆಯಾಗಿ ಕಾಣಿಸಿಕೊಳ್ಳುತ್ತದೆ. ಕ್ರೂರರಾದ ಮತಾಂಧರಿಂದ ಈಗ ಜಗತ್ತು ತುಂಬಿಹೋಗಿದೆ. ತಮ್ಮ ಆದರ್ಶಕ್ಕೆ ನಿಷ್ಠರಾಗಿರುವುದೆಂದರೆ, ಮಿಕ್ಕವರ ಆದರ್ಶಗಳನ್ನು ದ್ವೇಷಿಸುವುದು ಎಂದಾಗಿಬಿಡುತ್ತಿದೆ. ದ್ವೇಷಿಸುವುದು ಸುಲಭ, ಸಹಿಷ್ಣುತೆ ಕಠಿಣ. ಏಕದೇವನಿಷ್ಠೆಯು ಹಗೆತನವಾಗಿ ಬೆಳೆದಾಗ, ಎಂತಹ ವಿಚಿತ್ರಗಳು ಎದ್ದುನಿಲ್ಲುತ್ತವೆ ಎಂಬುದಕ್ಕೆ ಸ್ವಾಮಿ ವಿವೇಕಾನಂದರು ಘಂಟಾಕರ್ಣನೆಂಬ ಶಿವಭಕ್ತಿಧುರಂಧರನ ಕಥೆಯನ್ನು ನಿರೂಪಿಸಿದ್ದಾರೆ.

ಪುರಾತನ ಕಾಲದಲ್ಲಿ ಘಂಟಾಕರ್ಣನೆಂಬ ದೊಡ್ಡ ಶಿವಭಕ್ತನೊಬ್ಬನಿದ್ದನು. ಅವನು ಶಿವನನ್ನು ಮಾತ್ರವೇ ಪೂಜಿಸುತ್ತಿದ್ದ ಕಾರಣದಿಂದಾಗಿ, ಶಿವನಿಗೆ ತನ್ನನ್ನೇ ಸಂಪೂರ್ಣವಾಗಿ ಅರ್ಪಿಸಿಕೊಂಡಿದ್ದರ ಕಾರಣದಿಂದಾಗಿ, ವಿಷ್ಣುವನ್ನೂ, ವಿಷ್ಣುಭಕ್ತರನ್ನೂ ಬಹಳ ದ್ವೇಷಿಸುತ್ತಿದ್ದನು. ವಿಷ್ಣುವಿನ ಯಾವುದೇ ನಾಮವು ಕಿವಿಯ ಮೇಲೆ ಬಿದ್ದರೂ ಸಾಕು, ಕೋಪದಿಂದ ಅವನು ಸಿಡಿಮಿಡಿಗೊಳ್ಳುತ್ತಿದ್ದನು. ಆ ನಾಮಗಳನ್ನು ಕೇಳುವುದೇ ಬೇಡ ಎಂದು ಕರ್ಣಕುಂಡಲದಂತೆ ಕಿವಿಗಳಿಗೆ ಒಂದೊಂದು ಘಂಟೆಯನ್ನೇ ಕಟ್ಟಿಕೊಂಡಿದ್ದನು. ಅದೇ ಕಾರಣವಾಗಿ ಅವನನ್ನು ಎಲ್ಲರೂ 'ಘಂಟಾಕರ್ಣ' ಎಂದು ಕರೆಯುತ್ತಿದ್ದರು. ಕರ್ಣ ಎಂದರೆ ಕಿವಿ ಎಂದರ್ಥ. ಘಂಟಾಕರ್ಣನು ಹುಟ್ಟಿದಾಗ ಅವನ ತಾಯಿತಂದೆಗಳು ಏನು ಹೆಸರಿಟ್ಟಿದ್ದರೋ ತಿಳಿಯದು! ವಿಷ್ಣುಸಂಬಂಧಿಯಾದ ಯಾವುದಾದರೂ ನಾಮವು ಕಿವಿಯ ಮೇಲೆ ಬೀಳುವ ಸನ್ನಿವೇಶ ಬಂದರೆ ಸಾಕು, ತಲೆಯಲ್ಲಾಡಿಸಿ, ಗಂಟೆಯನ್ನು ಸದ್ದುಮಾಡಿ, ಆ ನಾಮವು ತನ್ನ ಕಿವಿಯೊಳಕ್ಕೆ ಪ್ರವೇಶಿಸದಂತೆ ಮಾಡಿಬಿಡುತ್ತಿದ್ದನು.

ಘಂಟಾಕರ್ಣನು ತನ್ನ ವಿಷಯದಲ್ಲಿಟ್ಟಿದ್ದ ದೃಢಭಕ್ತಿಯನ್ನು ಶಿವನು ಮೆಚ್ಚಿಕೊಂಡಿದ್ದನಾದರೂ ಅವನ ವಿಷ್ಣುದ್ವೇಷವನ್ನು ಮಾತ್ರ ಮೆಚ್ಚಿಕೊಂಡಿರಲಿಲ್ಲ. ಒಮ್ಮೆ ಶಿವನು ಘಂಟಾಕರ್ಣನಿಗೆ ಕಾಣಿಸಿಕೊಂಡು, "ಎಂತಹ ಮೂರ್ಖನೋ ನೀನು, ಈ ಜಗತ್ತಿಗೆ ಒಬ್ಬನೇ ದೇವರಲ್ಲದೆ ಇಬ್ಬರುಂಟೇನೋ; ನಾನೇ ವಿಷ್ಣು, ನಾನೇ ಶಿವ, ನಾನೇ ಬ್ರಹ್ಮ, ನಾನೇ ಕಾಳಿ ಎಂಬುದನ್ನು ನೀನು ಅರಿತುಕೋ! ನಾಮರೂಪಗಳು ಮಾತ್ರವೇ ಬೇರೆಬೇರೆಯೆಂಬುದನ್ನು ಅರಿತುಕೋ! ನನ್ನನ್ನು ಪೂಜಿಸುವುದು ಸರಿಯೆ, ಆದರೆ ವಿಷ್ಣುದ್ವೇಷವನ್ನು ತೊಲಗಿಸಿಬಿಡು, ಆ ನಿನ್ನ ದ್ವೇಷವನ್ನು ನಾನು ದ್ವೇಷಿಸುತ್ತೇನೆ" ಎಂದು ಬುದ್ಧಿವಾದ ಹೇಳಿದನು. ಆದರೆ ದೈವಾಂಧನಿಗೆ ಆ ಉಪದೇಶ ಹಿಡಿಸಲಿಲ್ಲ. "ನೀನು ಏನಾದರೂ ಹೇಳಿಕೋ ಸ್ವಾಮಿ, ಅದಾವುದನ್ನೂ ನಾನು ಕೇಳಲಾರೆ; ಆ ವಿಷ್ಣುವೆನಿಸಿಕೊಂಡವನ ಸಹವಾಸವೇ ನನಗೆ ಬೇಡ" ಎಂದು ಕಡ್ಡಿ ಎರಡು ತುಂಡು ಎಂಬಂತೆ ಹೇಳಿಬಿಟ್ಟನು. ಶಿವನಿಗೆ ಕೋಪಬಂದು, "ನೀನು ರಾಕ್ಷಸನಾಗು" ಎಂದು ಶಾಪಕೊಟ್ಟು ಹೊರಟುಹೋದನು.

ಘಂಟಾಕರ್ಣನು ತನ್ನ ಭವನದ ಪೂಜಾಗೃಹದಲ್ಲಿ ಸುಂದರವಾದ ಶಿವನ ವಿಗ್ರಹವೊಂದನ್ನು ಇರಿಸಿಕೊಂಡಿದ್ದನು. ಅದಕ್ಕೆ ನಿತ್ಯವೂ ನೇಮದಿಂದ ಅಷ್ಟವಿಧಾರ್ಚನೆಯನ್ನು ನೆರವೇರಿಸುತ್ತಿದ್ದನು. ಒಂದು ದಿನ ಹೀಗೆಯೇ ಘಂಟಾಕರ್ಣನು ಶಿವಪೂಜಾರಸಮಗ್ನನಾಗಿರುವಾಗ ಆ ಶಿವನ ಮೂರ್ತಿಯ ಒಂದರ್ಧ ಭಾಗದಲ್ಲಿ ವಿಷ್ಣುರೂಪವೂ ಇನ್ನೊಂದು ಅರ್ಧಭಾಗದಲ್ಲಿ ಶಿವನ ರೂಪವೂ ಗೋಚರಿಸಿತು. ಆ ಹರಿಹರರೂಪವನ್ನು ನೋಡಿಯಾದರೂ ಘಂಟಾಕರ್ಣನಿಗೆ ಶಿವನು ಬೇರೆಯಲ್ಲ, ವಿಷ್ಣುವು ಬೇರೆಯಲ್ಲ ಎಂಬ ವಿವೇಕವು ಉದಿಸಲೆಂದು ಶಿವನೇ ಆ ತಂತ್ರವನ್ನು ರೂಪಿಸಿದ್ದನು. ಆದರೆ ಅದೇನೂ ಪ್ರಯೋಜನಕ್ಕೆ ಬರಲಿಲ್ಲ. ಆ ಹೊತ್ತಿಗೆ ಸರಿಯಾಗಿ ಘಂಟಾಕರ್ಣನು ಮಗಮಗಿಸುವ, ಹೊಸದಾಗಿ ತಂದಿದ್ದ ಧೂಪವನ್ನು ಬೆಳಗಿಸುತ್ತಿದ್ದನು. ಅಂತಹ ದಿವ್ಯ ಪರಿಮಳವನ್ನು ತನ್ನ ಆರಾಧ್ಯದೈವವಾದ ಶಿವನು ಆಘ್ರಾಣಿಸಬೇಕೇ ಹೊರತು, ತನ್ನ ಶತ್ರುವೆನಿಸಿದ ವಿಷ್ಣುವು ಆಘ್ರಾಣಿಸಬಾರದು ಎಂದು ಘಂಟಾಕರ್ಣನು ಏನು ಮಾಡಬೇಕೆಂದು ತೋರದೆ, ತಕ್ಷಣವೇ ವಿಷ್ಣುರೂಪವಿದ್ದ ಒಂದು ಭಾಗದ ಮೂರ್ತಿಯ ಮೂಗಿನ ಹೊಳ್ಳೆಯನ್ನು ತನ್ನ ಹೆಬ್ಬೆರಳಿನಿಂದ ಬಲವಾಗಿ ಮುಚ್ಚಿ ಹಿಡಿದುಕೊಂಡುಬಿಟ್ಟನು.

ಘಂಟಾಕರ್ಣನ ಈ ಕೃತ್ಯದಿಂದ ವಿಷ್ಣುವು ಸುಪ್ರೀತನಾದನು. "ವಿಷ್ಣುವಾಗಿ ನಾನಿದ್ದೇನೆ ಎಂದು, ನನ್ನ ಇರುವಿಕೆಯನ್ನು ಈತನು ಇಷ್ಟೊಂದು ಪ್ರಬಲವಾಗಿ ನಂಬಿಕೊಂಡಿದ್ದಾನಲ್ಲ" ಎಂದು ವಿಷ್ಣುವು ಸಂತೋಷಪಟ್ಟನು. ಆ ಮುಹೂರ್ತದಲ್ಲಿಯೇ ಘಂಟಾಕರ್ಣನ ಪೂಜಾಗೃಹದಲ್ಲಿ ಪ್ರತ್ಯಕ್ಷನಾದನು. "ನಿನ್ನ ಶಿವನಿಷ್ಠೆಯನ್ನು ನಾನು ಮೆಚ್ಚಿದ್ದೇನೆ ಘಂಟಾಕರ್ಣ, ಆದರೆ ವಿಷ್ಣುವಾದ ನನ್ನನ್ನು ದ್ವೇಷಿಸುವುದನ್ನು ತೊರೆದುಬಿಡು. ಶಿವನು ನನ್ನ ಹೃದಯದಲ್ಲಿದ್ದಾನೆ, ನಾನು ಶಿವನ ಹೃದಯದಲ್ಲಿದ್ದೇನೆ. ನಾವಿಬ್ಬರೂ ಹರಿಹರರಾಗಿ ಏಕಮೂರ್ತಿಗಳಾಗಿದ್ದೇವೆ" ಎಂದು ಉಪದೇಶಿಸಿ, "ನಿನಗೆ ವಿವೇಕೋದಯವಾಗಲಿ, ನಿನಗೆ ಮಂಗಳ ವಾಗಲಿ" ಎಂದು ಆಶೀರ್ವದಿಸಿ ಅಂತರ್ಧಾನನಾದನು. ಆ ಬಳಿಕ ಘಂಟಾಕರ್ಣನಿಗೆ ವಿವೇಕವು ಜಾಗೃತವಾಯಿತೋ ಇಲ್ಲವೋ ತಿಳಿಯಲಿಲ್ಲ.

ಘಂಟಾಕರ್ಣನೆಂಬ ರಾಕ್ಷಸನೇ ಎಲ್ಲ ಮತಾಂಧತೆಗೂ ಮೂಲಪುರುಷನೆನ್ನಬಹುದು. ಬಂಗಾಳದೇಶದಲ್ಲಿ ಅವನಿಗೆ ವಿಚಿತ್ರವಾದ ಪರಿಯಲ್ಲಿ 'ಪೂಜೆ'ಯೂ ನೆರವೇರುತ್ತದೆ. ಘಂಟಾಕರ್ಣನದೆಂದು ಹೇಳುವ ಒಂದು ಮಣ್ಣಿನ ಮೂರ್ತಿ ಯನ್ನು ವಾರ್ಷಿಕವಾಗಿ ತಯಾರಿಸುತ್ತಾರೆ. ಅತ್ಯಂತ ದುರ್ಗಂಧ ಕುಸುಮಗಳನ್ನು ಹುಡುಕಿತಂದು, ಅವುಗಳಿಂದ ಆ ಮೂರ್ತಿಯನ್ನು ಪೂಜಿಸುತ್ತಾರೆ. "ವಿಷ್ಣುವು ದಿವ್ಯ ಪರಿಮಳವನ್ನು ಆಘ್ರಾಣಿಸದಂತೆ ತಡೆದೆಯಲ್ಲಾ, ಈಗ ಮೂಸು ಈ ದುರ್ಗಂಧವನ್ನು" ಎಂಬ ಪ್ರತೀಕಾರಭಾವನೆ ಅದರಲ್ಲಿರಬಹುದು. ಕೊನೆಯಲ್ಲಿ, "ಸಾಯಿ ಘಂಟಾಕರ್ಣನೇ, ಸಾಯಿ" ಎಂದು ಶಪಿಸುತ್ತ, ಅವನ ವಿಗ್ರಹವನ್ನು ಬಲವಾದ ಬಡಿಗೆಗಳಿಂದ ಬಡಿಬಡಿದು ಚೂರು ಮಾಡಿ, ಹರ್ಷೋದ್ಗಾರ ಗಳನ್ನು ಹೊಮ್ಮಿಸುತ್ತಾರೆ.

ನಾವು ಪ್ರತಿಯೊಬ್ಬರೂ ನಮನಮಗೆ ಇಷ್ಟವಾದ ಒಂದು ದೇವರನ್ನು ಸ್ವೀಕರಿಸಿ ಪೂಜಿಸಬೇಕು. ನಮ್ಮ ಸಾಧನೆ ಯಲ್ಲಿ ಪ್ರಾಮಾಣಿಕತೆಯಿರಬೇಕು; ನಮ್ಮ ಭಾವನೆಯಲ್ಲಿ ಸರ್ವಸಮರ್ಪಣವಿರಬೇಕು. ಒಂದು ಹಣ್ಣು ಕಳಿತು ಪಕ್ವವಾದ ಮೇಲೆ, ತನ್ನ ಭಾರದಿಂದಲೇ ತೊಟ್ಟು ಕಳಚಿ ನೆಲಕ್ಕೆ ಬೀಳುತ್ತದೆ. ಆದರೆ ಕಾಯಾಗಿರುವಾಗಲೇ ಬಲವಂತವಾಗಿ ಕಿತ್ತರೆ ಅದು ಹುಳಿಯಾಗಿರುತ್ತದೆ. ಹಾಗೆ ಭಾವಗಳು ಪಕ್ವವಾಗುವವರೆಗೂ ನಮ್ಮ ನೆಚ್ಚಿನ ದೇವರನ್ನು ಪೂಜಿಸಿದರೆ, ಆ ನಮ್ಮ ಇಷ್ಟದೈವವೇ ವಿಶಾಲವಾಗಿ ಬೆಳೆದು ವಿಶ್ವವ್ಯಾಪಿಯಾಗಿಬಿಡುತ್ತದೆ. **'ನಮ್ಮ ದೇವರೇ ಎಲ್ಲೆಲ್ಲಿಯೂ ಇದ್ದಾನೆ, ಅವನೇ ಎಲ್ಲವೂ ಆಗಿದ್ದಾನೆ'** ಎಂಬ ರಹಸ್ಯವು ಗೋಚರಿಸುತ್ತದೆ. ಹೀಗೆ ನಮ್ಮ ಅಂತರಂಗವು ಬಲಿಷ್ಠವಾದಮೇಲೆ, ನಮ್ಮ ಏಕನಿಷ್ಠೆಯ ಎಲ್ಲ ಬಂಧನಗಳೂ ಕಳಚಿಬಿಡುತ್ತವೆ. ಆಗ ನಮ್ಮ ಆದರ್ಶಗಳನ್ನು ಪ್ರೀತಿಸು ವುದೆಂದರೆ, ಎಲ್ಲರ ಆದರ್ಶಗಳನ್ನೂ ಪ್ರೀತಿಸುವುದು ಎಂದೇ ಆಗುತ್ತದೆ. ಆನೆಗೆ ಹೊರಕ್ಕೆ ಚಾಚಿಕೊಂಡ ಉದ್ದವಾದ ಎರಡು ದಂತಗಳಿರುತ್ತವೆ. ಅವು ಅಲಂಕಾರಕ್ಕೆ ಮಾತ್ರ, ಅವುಗಳಿಂದ ಏನನ್ನೂ ಅಗಿಯಲಾಗುವುದಿಲ್ಲ. ಆದರೆ ಬಾಯ ಒಳಗಿರುವ ಹಲ್ಲುಗಳಿಂದ ಅದು ತನ್ನ ಆಹಾರವನ್ನು ಅಗಿಯುತ್ತದೆ. **'ಹಾಥೀ ಕೇ ದಾಂತ್ ಖಾನೇ ಕೇ ಔರ್, ದಿಖಾನೇಕೆ ಔರ್'** 'ಆನೆಯ ಹಲ್ಲುಗಳು ತಿನ್ನುವುದಕ್ಕೇ ಬೇರೆ, ತೋರಿಕೆಗೇ ಬೇರೆ' ಎಂಬ ಗಾದೆಯೇ ಇದೆ. ಹಾಗೆಯೇ ಬಹಿರಂಗದಲ್ಲಿ ಎಲ್ಲರೊಡನೆ ಬೆರೆಯುತ್ತ, ಎಲ್ಲರ ಭಾವನೆಗಳಿಗೂ ಬೆಲೆಕೊಡುತ್ತ ಅಂತರಂಗದಲ್ಲಿ ಮಾತ್ರ ನಮ್ಮ ಆದರ್ಶದಲ್ಲಿ ಪ್ರತಿಷ್ಠಿತರಾಗಿಬಿಡಬೇಕು. ನಿಜವಾದ ವೇದಾಂತವು ಎಲ್ಲರಿಗೂ ಸಹಾನುಭೂತಿಯನ್ನು ತೋರಬೇಕು. ಏಕಮೇವ ಅದ್ವಿತೀಯ ಅಥವಾ ಅದ್ವೈತವೇ ವೇದಾಂತ ಸಾರ.

ಘಂಟಾಕರ್ಣನ ಕಥೆ ಪೌರಾಣಿಕ ಜಗತ್ತಿನಲ್ಲಿ ಬಹಳ ಪ್ರಖ್ಯಾತವಾಗಿದೆ ಮತ್ತು ವೈವಿಧ್ಯಪೂರ್ಣವೂ ಆಗಿದೆ. ಕಿವಿಗೆ ಗಂಟೆ ಕಟ್ಟಿಕೊಂಡಿದ್ದ ಅವನು ಒಮ್ಮೆ ಪಾಕಶಾಲೆಯಲ್ಲಿದ್ದಾಗ, ಶಿವನು ವೇಷಮರೆಸಿಕೊಂಡು, ಅವನ ಬೆನ್ನಹಿಂದೆ ಬಂದು 'ಹರಿಯಿತು' ಎಂದು ಕೂಗಿದನಂತೆ. ಆ ಶಬ್ದದಲ್ಲಿ 'ಹರಿ' ಎಂಬ ವಿಷ್ಣುನಾಮವು ಬಂತಲ್ಲಾ ಎಂದು ಅದನ್ನು ಸಹಿಸಿಕೊಳ್ಳಲಾರದೆ, ಘಂಟಾಕರ್ಣನು ಅಲ್ಲಿಯೇ ಇದ್ದ ಒಂದು ಸಟ್ಟುಗವನ್ನು ಕೈಗೆತ್ತಿಕೊಂಡು ಆ ವೇಷಾಂತರಿಯನ್ನು ಬಡಿದೋಡಿಸಿದನು.

ಘಂಟಾಕರ್ಣನು ಮೊದಲಿಗೆ ವಿಷ್ಣುಭಕ್ತನೇ ಆಗಿದ್ದನು ಎಂಬ ಕಥೆಯೂ ಇದೆ. ವಿಷ್ಣುವಿನಿಂದಲೇ ಶಿವನು ಸರ್ವೋತ್ತಮನೆಂಬುದನ್ನು ಅರಿತುಕೊಂಡನಂತೆ. ಹಾಗೆ ಅರಿತಮೇಲೆ ಶಿವನನ್ನು ಕುರಿತು ಘೋರತಪಸ್ಸನ್ನು ಆಚರಿಸುತ್ತ, ತನ್ನ ಶರೀರವನ್ನೇ ಶಿವನಿಗಾಗಿ ಸಮರ್ಪಿಸಿದನು. ಆಗ ಘಂಟಾಕರ್ಣನ ದೇಹವೇ ಶಿವಾಲಯದ ಹೊಸ್ತಿಲಾಯಿತು. ಅವನ ಕೈಕಾಲುಗಳೇ ಅದಕ್ಕೆ ಬಾಗಿಲಾದವು. ಅವನ ತಲೆಯೇ ಘಂಟೆಯಾಯಿತು. ಶಿವಾಲಯವನ್ನು ಹೊಕ್ಕೊಡನೆ ಘಂಟೆ ಯನ್ನು ಬಾರಿಸಿ, ಆಮೇಲೆ ಶಿವನನ್ನು ಪೂಜಿಸಿದರೆ, ಶಿವನು ಮೆಚ್ಚಿಕೊಳ್ಳುತ್ತಾನೆ ಎಂಬ ಪ್ರತೀತಿಯೂ ಉಂಟಾಯಿತು. ಶಿವ ಬೇರೆ ವಿಷ್ಣು ಬೇರೆ ಎಂಬ ಭೇದಭಾವ ಸಲ್ಲದು. ಅಷ್ಟುಮಾತ್ರವಲ್ಲ; 'ನಾನು ಬೇರೆ ದೇವರು ಬೇರೆ' ಎಂಬ ಭಾವನೆಯೂ ಸಲ್ಲದು. ಆದ್ದರಿಂದಲೇ ವಿವೇಕಾನಂದರು "ಎಲ್ಲಿಯವರೆಗೆ ನಿಮಗೆ ಮತ್ತು ಪರಮಾತ್ಮನಿಗೆ ಕೂದಲೆಳೆಯಷ್ಟು ವ್ಯತ್ಯಾಸವಾದರೂ ಇರುವುದೋ ಅಲ್ಲಿಯವರೆಗೆ ಅಂಜಿಕೆ ನಿಮ್ಮನ್ನು ಬಿಟ್ಟು ತೊಲಗುವುದಿಲ್ಲ" ಎಂದು ಎಚ್ಚರಿಸಿದ್ದಾರೆ. ⌘

ಕಥೆ : ರೇವತಿ

ಚಿತ್ರ : ಗೋವಿ

# ಜಗನ್ಮಾತೆಯಿಂದ ಅನುಗ್ರಹ ಪಡೆದ ಸರಳಾದಾಸ












**4**




**5**

ಚಿದು ಹಾಡುತ್ತ ಇದ್ದನು. ಅವನ ಹಾಡಿನ ಮಾಧುರ್ಯದಿಂದ ಇಡೀ ವಾತಾವರಣ ಶಾಂತಿಯುತವಾಯಿತು. ಹಕ್ಕಿಗಳು ಹಾರುವುದನ್ನು ನಿಲ್ಲಿಸಿದವು. ಮರಗಳ ಕೊಂಬೆಗಳ ಮೇಲೆ ಕುಳಿತುಕೊಂಡು ಏಕಾಗ್ರತೆಯಿಂದ ಆಲಿಸಲಾರಂಭಿಸಿದವು.

**6**

ಸರಳಾದೇವಿಯು ಬಾವಿಯ ಕಟ್ಟೆಯ ಮೇಲೆ ಕುಳಿತು, ಚಿದುವಿನ ಹಾಡನ್ನು ಕೇಳುತ್ತ ತನ್ನನ್ನೇ ತಾನು ಮರೆತುಬಿಟ್ಟಳು.



**7**

ಕೇಳುತ್ತ, ಕೇಳುತ್ತ, ಸರಳಾದೇವಿಯು ಸಂತೋಷದಿಂದ ಕೈಯಲ್ಲಿ ತಾಳ ಹಾಕಲಾರಂಭಿಸಿದಳು. ಚಿದು ದಿಗ್ಭ್ರಾಂತನಾದನು. ಹಾಡು ಕೇಳುತ್ತಿರುವವಳು ಸರಳಾ ದೇವಿಯೇ ಎಂದು ಅವನಿಗೆ ಗೊತ್ತಾಗಲಿಲ್ಲ. ಉಳಿದವರು ಕೂಡ ಸಂಗೀತದಲ್ಲಿ ಮಗ್ನರಾಗಿಬಿಟ್ಟಿದ್ದರು. ಆದರೆ ಅವರಿಗೆ ದೇವಿಯ ದರ್ಶನ ಆಗಲಿಲ್ಲ.

**8**




**9**




10
ಚಿದು ಮೈ ಮರೆತು ಹಾಡುತ್ತಿದ್ದನು. ಆಗ ನೀರು ಹಾಯಿಸಲು ಉಪಯೋಗಿಸುತ್ತಿದ್ದ ದೊಣ್ಣೆ ಅವನ ಕೈಯಿಂದ ಜಾರಿ ಬಾವಿಯೊಳಗೆ ಬಿದ್ದುಹೋಯಿತು. ಅವನ ತಂದೆ ಮತ್ತು ಅಣ್ಣ ಇದರಿಂದ ಕೋಪಗೊಂಡು ಅವನಿಗೆ ಸಿಕ್ಕಾಪಟ್ಟೆ ಹೊಡೆದರು.
ನೀನೊಬ್ಬ ಕೆಲಸಕ್ಕೆ ಬಾರದವ. ನೀನು ದೊಣ್ಣೆಯನ್ನು ಕಳೆದುಕೊಂಡೆ.


11
ಅಯ್ಯೋ, ಈ ನೋವನ್ನು ತಡೆಯಲಾಗುತ್ತಿಲ್ಲವಲ್ಲ! ಆ ದೇವಿ ವರವನ್ನು ಕೊಡುತ್ತೇನೆ ಎಂದು ಹೇಳಿದ್ದಳಲ್ಲವೇ? ನಾನು ಅವಳನ್ನು ಕರೆದರೆ ಅವಳೀಗ ಬಂದು ವರವನ್ನು ಕೊಡುತ್ತಾಳೇನು?


12
ಅವನು ದೇವಿಯನ್ನು ನೆನಪಿಸಿಕೊಂಡ ತಕ್ಷಣವೇ, ಸರಳಾದೇವಿಯು ಆತನ ಮುಂದೆ ಪ್ರತ್ಯಕ್ಷಳಾದಳು.
ನನ್ನ ಪ್ರೀತಿಯ ಚಿದು, ನಿನಗೇನು ವರ ಬೇಕು ಎಂದು ನಿಶ್ಚಯ ಮಾಡಿಕೊಂಡಿದ್ದೀಯೇನಪ್ಪಾ?!
ಜಗನ್ಮಾತೆಯೇ, ಮೊದಲು ನನ್ನ ಮೈನೋವನ್ನು ನಿವಾರಿಸು. ತುಂಬಾ ನೋಯುತ್ತಿದೆ.


13
ಮಗೂ, ನಿನಗೆ ಇನ್ನು ಮೇಲೆ ನೋವಾಗುವುದಿಲ್ಲ. ನಿನಗೆ ಏನು ವರ ಕೊಡಬೇಕೆಂದು ನಾನು ಈಗಾಗಲೇ ನಿರ್ಧರಿಸಿದ್ದೇನೆ. ಇಲ್ಲಿಗೆ ಬಾ. ನಿನ್ನ ನಾಲಗೆಯನ್ನು ಚಾಚು.
ದೇವಿಯು ಚಿದುವಿನ ನಾಲಗೆಯ ಮೇಲೆ ತನ್ನ ತ್ರಿಶೂಲದಿಂದ ಏನನ್ನೋ ಬರೆದಳು.

**14** ಇನ್ನು ಮುಂದೆ ನೀನು ಗೋವಳನಾದ ಚಿದುವಲ್ಲ. ವಾಲ್ಮೀಕಿ ಮತ್ತು ವ್ಯಾಸರು ನಿನ್ನ ನಾಲಿಗೆಯಲ್ಲಿ ನಲಿದಾಡುತ್ತಾರೆ. ನೀನು ದೊಡ್ಡ ವಿದ್ವಾಂಸನಾಗುತ್ತೀಯೆ. ಒರಿಯಾ ಭಾಷೆಯ ಸಾಹಿತ್ಯಕ್ಕೆ ದೊಡ್ಡ ಕೊಡುಗೆಯನ್ನು ನೀಡುತ್ತೀಯೆ.



**15** ಸರಳಾದೇವಿಯ ಕೃಪೆಯಿಂದ ಚಿದು ದೊಡ್ಡ ವಿದ್ವಾಂಸನಾದನು. ಇದುವರೆಗೂ ಎಲ್ಲರಿಗೂ ಅಪಹಾಸ್ಯದ ವ್ಯಕ್ತಿಯಾಗಿದ್ದ ಚಿದುವು ಬಹಳ ಶ್ರೇಷ್ಠಮಟ್ಟದ ಕವಿಯಾಗಿ ಮಾರ್ಪಟ್ಟನು. ಅವನು ರಾಮಾಯಣ ಮತ್ತು ಮಹಾಭಾರತ ಕಥೆಗಳನ್ನು ಒರಿಯಾ ಭಾಷೆಯಲ್ಲಿ ರಚಿಸಿದನು. ನಿರಕ್ಷರಸ್ಥರು ಕೂಡ ಇದನ್ನು ಕೇಳಿ ಅರ್ಥ ಮಾಡಿಕೊಳ್ಳುತ್ತಿದ್ದರು. ಅಂದಿನಿಂದ ಚಿದು ಸರಳಾದಾಸನೆಂದು ಪ್ರಖ್ಯಾತನಾದನು.

**16** ಸರಳಾದಾಸನು ಭಕ್ತಿಸಾಹಿತ್ಯವನ್ನು ಮಾತ್ರ ರಚಿಸಲಿಲ್ಲ. ಸಮಾಜದ ರಕ್ಷಣೆಗೂ ಸ್ಪಂದಿಸುತ್ತಿದ್ದನು. ಒಂದು ದಿನ ಆರಕ್ಷಕರು ಅವನನ್ನು ಹುಡುಕುತ್ತ ಬಂದರು.

ಸ್ವಾಮಿ, ದಯವಿಟ್ಟು ನಮ್ಮನ್ನು ಕ್ಷಮಿಸಿರಿ. ಶತ್ರುಗಳು ನಮ್ಮ ಮೇಲೆ ಮುತ್ತಿಗೆ ಹಾಕಿದ್ದಾರೆ. ಪ್ರತಿಯೊಂದು ಮನೆಯಲ್ಲಿಯೂ ಒಬ್ಬೊಬ್ಬ ವ್ಯಕ್ತಿಯನ್ನು ಸೈನ್ಯಕ್ಕೆ ಸೇರಿಸಿಕೊಳ್ಳಬೇಕೆಂದು ರಾಜನು ಆದೇಶವಿತ್ತಿದ್ದಾನೆ. ನಿಮ್ಮ ಹೆಸರು ಆ ಪಟ್ಟಿಯಲ್ಲಿ ಇದೆ.

ಬೇಡ ಮಗು, ಬೇಡ. ನೀನು ಹಾಡುಗಳನ್ನು ರಚಿಸುತ್ತ ಹೋಗು. ಯುದ್ಧಕ್ಕೆ ಹೋಗಬೇಡ. ನಾನು ಅಥವಾ ನಿನ್ನ ಸಹೋದರರು ಯುದ್ಧಕ್ಕೆ ಹೋಗುತ್ತೇವೆ. ನಿನ್ನ ಸಾಹಿತ್ಯಸೇವೆಗೆ ಭಂಗಬರಬಾರದು. ನಿರಂತರವಾಗಿ ಅದು ಮುಂದುವರೆಯಲಿ.



**17** ಸರಳಾದಾಸನು ತಂದೆಯನ್ನು ಸಮಾಧಾನಪಡಿಸಿದನು. ಯುದ್ಧಕ್ಕೆ ಹೋದನು. ತಾಯ್ನಾಡಿನ ವಿಜಯಕ್ಕೆ ಸಹಾಯ ಮಾಡಿದನು. ಸರಳಾದಾಸನು 'ಜನಸಾಮಾನ್ಯರ ಕವಿ' ಮತ್ತು 'ಒರಿಯಾ ಸಾಹಿತ್ಯದ ಪಿತಾಮಹ' ಎಂದು ಜನರು ಅವನನ್ನು ಹೊಗಳುತ್ತಾರೆ. ಅವನ ರಾಮಾಯಣವನ್ನು 'ಗ್ರಾಮೀಣ ರಾಮಾಯಣ' ಎಂದು ಕರೆಯುತ್ತಾರೆ.





**ಶಿಷ್ಯ :** ಅಮ್ಮಾ, ಭಗವಂತನನ್ನು ಹೇಗೆ ನೋಡುವುದು?

**ಶ್ರೀಮಾತೆ ಶಾರದಾದೇವಿ:** ಭಗವಂತನ ಅನುಗ್ರಹದಿಂದ ಮಾತ್ರವೇ ಆತನನ್ನು ನೋಡಬಹುದು. ಜಪ ಮತ್ತು ಧ್ಯಾನಗಳನ್ನು ಮಾಡುತ್ತ ಹೋಗಬೇಕು. ಅವು ಮನಸ್ಸಿನಲ್ಲಿರುವ ಕೊಳಕನ್ನು ನಿವಾರಿಸುತ್ತವೆ. ಹಾಗೆಯೇ ಪ್ರಾರ್ಥನೆ ಮುಂತಾದ ಆಧ್ಯಾತ್ಮಿಕ ಸಾಧನೆಗಳನ್ನೂ ಮಾಡುತ್ತಿರಬೇಕು. ನಾವು ಹೂವನ್ನು ಮುಡಿದುಕೊಂಡಾಗ, ಅದರ ಸುವಾಸನೆ ಎಲ್ಲ ಕಡೆ ಹರಡುತ್ತದೆ. ಹಾಗೆಯೇ ಗಂಧದ ತುಂಡನ್ನು ಕಲ್ಲಿಗೆ ಉಜ್ಜಿದಾಗ, ಸುಗಂಧವು ಸುತ್ತಲೂ ಪಸರಿಸುತ್ತದೆ. ಹಾಗೆಯೇ ಭಗವಂತನ ನಿರಂತರ ಸ್ಮರಣೆ ಭಕ್ತಿಭಾವವನ್ನು ಎಲ್ಲ ಕಡೆ ಮೂಡಿಸುತ್ತದೆ. ಈ ಮೂಲಕ ಎಲ್ಲ ಆಸೆಗಳಿಂದ ಬಿಡುಗಡೆಯನ್ನು ಪಡೆಯಬಹುದು ಹಾಗೂ ಭಗವಂತನ ಸಾಕ್ಷಾತ್ಕಾರವನ್ನು ಹೊಂದಬಹುದು.

# ಕರ್ನಾಟಕ ವಿವೇಕಾನಂದ ರಥಯಾತ್ರೆ ಸಮಿತಿಯ ಪ್ರಥಮ ಸಮಾವೇಶ




ಸ್ವಾಮಿ ವಿವೇಕಾನಂದರ ೧೫೦ನೇ ಜಯಂತಿ ಮಹೋತ್ಸವದ ಅಂಗವಾಗಿ ಜರುಗಿದ ರಾಜ್ಯವ್ಯಾಪಿ ವಿವೇಕಾನಂದ ರಥಯಾತ್ರೆಯ ಅಂಗವಾಗಿ, ಕರ್ನಾಟಕದ ೩೦ ಜಿಲ್ಲೆಗಳ ೨೨೦ ತಾಲ್ಲೂಕುಗಳಲ್ಲಿ ೨೮೦ ಸಾರ್ವಜನಿಕ ಸಮಾರಂಭಗಳನ್ನು ೨೦೧೩ರ ಜೂನ್ ತಿಂಗಳಿನಿಂದ ಡಿಸೆಂಬರ್ ತಿಂಗಳಿನವರೆಗೆ ಏರ್ಪಡಿಸಲಾಗಿತ್ತು. ಸುಮಾರು ೧೦ ಲಕ್ಷಕ್ಕೂ ಹೆಚ್ಚು ಜನ, ಮುಖ್ಯವಾಗಿ ವಿದ್ಯಾರ್ಥಿಗಳು ಇವುಗಳಲ್ಲಿ ಪಾಲ್ಗೊಂಡಿದ್ದರು. ಕರ್ನಾಟಕ ರಾಜ್ಯದಾದ್ಯಂತ ಸ್ಥಾಪನೆಗೊಂಡಿದ್ದ ಸ್ಥಳೀಯ ಆಯೋಜನಾ ಸಮಿತಿಗಳ ತುಂಬು ಸಹಕಾರದಿಂದ ಮಾತ್ರವೇ ಈ ರಥಯಾತ್ರೆಯು ಇಷ್ಟೊಂದು ಯಶಸ್ವಿಯಾಗಲು ಕಾರಣವಾಯಿತು. ರಥಯಾತ್ರೆಗೆ ಸಿಕ್ಕ ಅಭೂತಪೂರ್ವ ಸ್ವಾಗತವನ್ನು ಗಮನದಲ್ಲಿ ಇಟ್ಟುಕೊಂಡು, ಬೆಂಗಳೂರು ರಾಮಕೃಷ್ಣ ಮಠದ ಅಧ್ಯಕ್ಷರಾದ ಪೂಜ್ಯ ಸ್ವಾಮಿ ಹರ್ಷಾನಂದಜಿ ಮಹಾರಾಜರ ಮಾರ್ಗದರ್ಶನದಲ್ಲಿ, ಕರ್ನಾಟಕದಾದ್ಯಂತ ರಚಿತವಾಗಿದ್ದ ಸ್ವಾಗತಸಮಿತಿಗಳ ಪ್ರತಿನಿಧಿಗಳ ಒಂದು ದಿನದ ಸಮಾವೇಶವನ್ನು ಆಯೋಜಿಸಲು ನಿರ್ಧರಿಸಲಾಯಿತು. ರಥಯಾತ್ರೆಯ ಸಮಯದಲ್ಲಿ ಮೂಡಿದ್ದ ಅಗಾಧ ಉತ್ಸಾಹವನ್ನು ಮುಂದುವರೆಸಿಕೊಂಡು, ಸ್ಥಳೀಯ ಸಮಿತಿಗಳನ್ನು ಸ್ವಾಮಿ ವಿವೇಕಾನಂದರ ಹೆಸರಿನಲ್ಲಿ ಕೆಲವು ಸೇವಾಕಾರ್ಯಗಳನ್ನು ಕೈಗೊಳ್ಳುವಂತೆ ಪ್ರೇರೇಪಿಸುವುದೇ ಈ ಸಮಾವೇಶದ ಉದ್ದೇಶವಾಗಿತ್ತು. ಇದರಂತೆ ವಿವೇಕಾನಂದ ರಥಯಾತ್ರೆ ಸಮಿತಿಗಳ ಪ್ರಥಮ ಸಮಾವೇಶವನ್ನು ಬೆಂಗಳೂರಿನ ಬಸವನಗುಡಿ ರಸ್ತೆಯಲ್ಲಿರುವ ರಾಮಕೃಷ್ಣ ಮಠದಲ್ಲಿ ೧೬. ೨. ೨೦೧೪ರಂದು ಆಯೋಜಿಸಲಾಗಿತ್ತು. ಈ ಸಮಾವೇಶವು ರಾಮಕೃಷ್ಣ ಮಠ ಮತ್ತು ಮಿಷನ್ನಿನ ಕರ್ನಾಟಕ ರಾಜ್ಯದ ಶಾಖೆಗಳು ಮತ್ತು ಕರ್ನಾಟಕ ರಾಮಕೃಷ್ಣ – ವಿವೇಕಾನಂದ ಭಾವಪ್ರಚಾರ ಪರಿಷತ್ತುಗಳ ಆಶ್ರಯದಲ್ಲಿ ಏರ್ಪಾಡಾಗಿತ್ತು.

ಈ ಸಮಾವೇಶದಲ್ಲಿ ಸುಮಾರು ೬೦೦ ಪ್ರತಿನಿಧಿಗಳು ಭಾಗವಹಿಸಿದ್ದರು. ಸಮಾರಂಭವು ಬೆಳಗ್ಗೆ ೯.೩೦ ಗಂಟೆಗೆ ಆರತಿ ಮತ್ತು ಭಜನೆಗಳೊಂದಿಗೆ ಪ್ರಾರಂಭವಾಯಿತು. ಬೆಳಗಿನ ಸಮಾವೇಶದ ಅಧ್ಯಕ್ಷತೆಯನ್ನು ಪೂಜ್ಯ ಸ್ವಾಮಿ ಹರ್ಷಾನಂದಜಿ ಮಹಾರಾಜ್ ಅವರು ವಹಿಸಿದ್ದರು. ಹೈದರಾಬಾದಿನ ರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ಜ್ಞಾನದಾನಂದಜಿ ಅವರು ಮುಖ್ಯ ಅತಿಥಿಗಳಾಗಿದ್ದರು. ಕರ್ನಾಟಕ ಭಾವಪ್ರಚಾರ ಪರಿಷತ್ತಿನ ಸಂಯೋಜಕರಾದ ಸ್ವಾಮಿ ವೀರೇಶಾನಂದ ಸರಸ್ವತಿ ಅವರು ಸ್ವಾಮಿ ವಿವೇಕಾನಂದರ ಜೀವನ ಮತ್ತು ಸಂದೇಶಗಳ ಪ್ರಸ್ತುತತೆಯ ಬಗ್ಗೆ ಮಾತನಾಡಿದರು. ವಿವೇಕಾನಂದ ರಥಯಾತ್ರೆಯ ಕರ್ನಾಟಕ ರಾಜ್ಯದ ಸಂಚಾಲಕರಾದ ಸ್ವಾಮಿ ತ್ಯಾಗೀಶ್ವರಾನಂದಜಿ ಅವರು ರಥಯಾತ್ರೆಯ ಬಗ್ಗೆ ವರದಿ ಸಲ್ಲಿಸಿದರು. ಈ ರಥಯಾತ್ರೆಯಲ್ಲಿ ಭಾಗವಹಿಸಿದ್ದ ಕೆಲವು ಸ್ಥಳೀಯ ಆಯೋಜಕರು ರಥಯಾತ್ರೆಯ ತಮ್ಮ ಅನುಭವವನ್ನು ಮತ್ತು ಅದರಿಂದ ಉಂಟಾದ ಪ್ರಭಾವವನ್ನು ಎಲ್ಲರೊಡನೆ ಹಂಚಿಕೊಂಡರು.

ಮಧ್ಯಾಹ್ನದ ಸಮಾವೇಶದಲ್ಲಿ ತಮಿಳುನಾಡಿನ ಉದಕಮಂಡಲದಲ್ಲಿರುವ ರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ರಾಘವೇಶಾನಂದಜಿ ಅವರು ಸ್ವಾಮಿ ವಿವೇಕಾನಂದರ ಹೆಸರಿನಲ್ಲಿ ಕೈಗೊಳ್ಳಬಹುದಾದ ಹತ್ತುಹಲವು ಸೇವಾಕಾರ್ಯಗಳ ಬಗ್ಗೆ ಮತ್ತು ಸಮಾಜಕ್ಕೆ ಅವುಗಳಿಂದ ಉಂಟಾಗುವ ಪ್ರಯೋಜನಗಳ ಬಗ್ಗೆ ಮಾತನಾಡಿದರು. ಅನಂತರ ಆಗಮಿಸಿದ್ದ ಪ್ರತಿನಿಧಿಗಳು, ತಮ್ಮ ತಮ್ಮ ಜಿಲ್ಲೆಗಳಿಗೆ ಅನುಗುಣವಾಗಿ ಏಳು ಗುಂಪುಗಳಲ್ಲಿ ಈ ವಿಚಾರದ ಬಗ್ಗೆ ಚರ್ಚಿಸಿದರು. ಸುಮಾರು ಒಂದು ಗಂಟೆಯ ಕಾಲ ಈ ಗುಂಪುಚರ್ಚೆ ನಡೆಯಿತು. ಇದರಲ್ಲಿ ಚರ್ಚಿತವಾದ ಸಂಭಾವ್ಯ ಸೇವಾ ಕಾರ್ಯಗಳು ಹೀಗಿವೆ: ೧. ಪ್ರೌಢಶಾಲೆಯ ವಿದ್ಯಾರ್ಥಿಗಳಿಗಾಗಿ 'ವಿವೇಕಾನಂದ ಬಾಲಕ ಸಂಘ' ಮತ್ತು ಚಿಕ್ಕ ಮಕ್ಕಳಿಗೆ ಬಾಲವಿಹಾರಗಳ ಸ್ಥಾಪನೆ. ೨. ಊರಿನ ರಸ್ತೆಗಳಿಗೆ ಸ್ವಾಮಿ ವಿವೇಕಾನಂದರ ಹೆಸರನ್ನು ಇಡುವುದು. ೩. ಉದ್ಯಾನವನದಲ್ಲಿ ಸ್ವಾಮಿ ವಿವೇಕಾನಂದರ ವಿಗ್ರಹವನ್ನು ಸ್ಥಾಪಿಸಿ ಅದನ್ನು ಕಾಪಾಡಿಕೊಳ್ಳುವುದು. ೪. ಸ್ವಾಮಿ ವಿವೇಕಾನಂದರ ಹೆಸರಿನಲ್ಲಿ ಶಾಲೆಯ ಪ್ರಾರಂಭ. ೫. ಕಾಲೇಜುಗಳಲ್ಲಿ ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವುದು. ೬. ಬಡಕುಟುಂಬಗಳ ಮಹಿಳೆಯರಿಗಾಗಿ ಸ್ತ್ರೀ–ಸ್ವಸಹಾಯ ಕೇಂದ್ರಗಳನ್ನು ಸ್ಥಾಪಿಸುವುದರ ಮೂಲಕ ಮಹಿಳಾ ಸಬಲೀಕರಣದ ಕಾರ್ಯಕ್ರಮ. ೭. ಔದ್ಯೋಗಿಕ ತರಬೇತಿ ಕೇಂದ್ರಗಳ ಸ್ಥಾಪನೆ. ೮. ಸ್ವಾಮಿ ವಿವೇಕಾನಂದರ ಹೆಸರಿನಲ್ಲಿ ಗ್ರಂಥಾಲಯಗಳು, ವಾಚನಾಲಯಗಳು, ಯೋಗಕೇಂದ್ರಗಳು, ವ್ಯಾಯಾಮಶಾಲೆಗಳನ್ನು ಸ್ಥಾಪಿಸುವುದು ೯. ಬಸ್ ನಿಲ್ದಾಣಗಳಲ್ಲಿ ಮತ್ತು ರೈಲ್ವೇ ನಿಲ್ದಾಣಗಳಲ್ಲಿ ಪುಸ್ತಕ ಮಾರಾಟ ಕೇಂದ್ರಗಳ ಸ್ಥಾಪನೆ. ೧೦. ಶಾಲಾಕಾಲೇಜುಗಳಲ್ಲಿ ಯುವದಿನಾಚರಣೆಯ ಆಚರಣೆ ಮತ್ತು ವಿವೇಕಾನಂದರ ಜೀವನ–ಸಂದೇಶಗಳ ಆಧಾರದ ಮೇಲೆ ವಿವಿಧ ರೀತಿಯ ಸ್ಪರ್ಧೆಗಳನ್ನು ಏರ್ಪಡಿಸುವುದು. ಈ ಬಗೆಯ ಸಮಾವೇಶಗಳನ್ನು ಪ್ರತಿ ಜಿಲ್ಲೆಯಲ್ಲಿಯೂ ಆಯೋಜಿಸಲು ನಿರ್ಧರಿಸಲಾಯಿತು. ಎಲ್ಲ ಪ್ರತಿನಿಧಿಗಳಿಗೂ ಉಪಯುಕ್ತ ಪುಸ್ತಕಗಳನ್ನು ವಿತರಿಸಲಾಯಿತು. ಸಾಂಸ್ಕೃತಿಕ ಕಾರ್ಯಕ್ರಮದೊಂದಿಗೆ ಈ ಸಮಾವೇಶ ಮುಕ್ತಾಯವಾಯಿತು. ⌘

Managing Editor : Swami Muktidananda    Editor : Swami Vireshananda

Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.D-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಪ್ರವಾಸ 2014

## ರೈಲು ಹಾಗೂ ಬಸ್ಸಿನಲ್ಲಿ

## ಹೋಟೆಲ್ ರೂಂ ಹಾಗೂ ನಮ್ಮ ಊಟೋಪಚಾರದೊಂದಿಗೆ






### ದಕ್ಷಿಣ ಭಾರತ : 10 ದಿನಗಳು

Apr 25 May 06

ಗುರುವಾಯೂರ್, ಕಾಲಡಿ, ತಿರುವನಂತಪುರ, ಸುಚೀಂದ್ರಂ, ಕನ್ಯಾಕುಮಾರಿ, ರಾಮೇಶ್ವರಂ, ಮಧುರೈ, ತಿರುಚಿ, ಶ್ರೀರಂಗಂ, ತಂಜಾವೂರ್, ಕುಂಭಕೋಣಂ, ಚಿದಂಬರಂ, ತಿರುವಣ್ಣಾಮಲೈ, ನವಗ್ರಹ

### ಅಮರನಾಥ್ - ವೈಷ್ಣವಿ ದೇವಿ : 19 ದಿನಗಳು

June 25 July 01

ಅಮರನಾಥ್, ವೈಷ್ಣವಿ ದೇವಿ, ಶ್ರೀನಗರ, ಕುರುಕ್ಷೇತ್ರ, ವಾಘಾ ಬಾರ್ಡರ್, ಅಮೃತ್‌ಸರ್, ದೆಹಲಿ

### ಚಾರೋ ಧಾಮ್ ಕಾಶಿ ಗಯಾ : 12/19/26 ದಿನಗಳು

Sep 01 Oct 05

ಆಗ್ರಾ, ಮಥುರ, ಬೃಂದಾವನ, ಹರಿದ್ವಾರ, ಕೆಂಪ್ಟಿ ಫಾಲ್ಸ್, ಯಮುನೋತ್ರಿ, ಗಂಗೋತ್ರಿ, ಉತ್ತರಕಾಶಿ, ಗೌರೀಕುಂಡ, ಕೇದಾರನಾಥ್, ತ್ರಿಯುಗಿ, ಮಾನಾ, ವ್ಯಾಸ ಗುಹ, ಗಣೇಶ ಗುಹ, ಕೇಶವ ಪ್ರಯಾಗ್, ಬದರಿನಾಥ್, ಋಷಿಕೇಶ್, ದೆಹಲಿ, ಅಲಹಾಬಾದ್, ಗಯಾ, ಬುದ್ಧಗಯಾ, ವಾರಣಾಸಿ, ಸಾರಾನಾಥ್

### ತೀರ್ಥ ಯಾತ್ರಾ : 22 ದಿನಗಳು

Sep 01 Oct 05

ಆಗ್ರಾ, ಮಥುರ, ಬೃಂದಾವನ, ಅಲಹಾಬಾದ್, ಗಯಾ, ಬುದ್ಧಗಯಾ, ಕಾಶಿ, ಸಾರಾನಾಥ್, ಅಯೋಧ್ಯಾ, ಹರಿದ್ವಾರ, ಗೌರೀಕುಂಡ, ಕೇದಾರನಾಥ್, ತ್ರಿಯುಗಿ ನಾರಾಯಣ, ಮಾನಾ, ವ್ಯಾಸ ಗುಹ, ಗಣೇಶ ಗುಹ, ಕೇಶವ ಪ್ರಯಾಗ್, ಬದರಿನಾಥ್, ಋಷಿಕೇಶ್, ದೆಹಲಿ

### ಪಂಚ ದ್ವಾರಕ ಮತ್ತು ಅಷ್ಟ ಜ್ಯೋತಿರ್ಲಿಂಗ : 24 ದಿನಗಳು

Oct 25 Nov 15

ಪುಷ್ಕರ, ನಾಥದ್ವಾರ, ಕಾಂಕ್ರೋಲಿ, ಏಕಲಿಂಗ್ಜಿ, ಉದಯಪುರ, ಮೌಂಟ್ ಅಬು, ಮಾತೃಗಯಾ, ಶಿರಡಿ, ದ್ವಾರಕ, ಬೇಟ್‌ದ್ವಾರಕ, ನಾಗೇಶಂ, ಮೂಲ ದ್ವಾರಕ, ಪೋರಬಂದರ್, ವಿರಾವಲ್, ಸೋಮನಾಥ್, ಡಾಕೋರ್, ಅಹಮದಾಬಾದ್, ಉಜ್ಜೈನಿ, ಓಂಕಾರೇಶ್ವರ, ಪರ್ಲಿ, ಔರಂಗಾಬಾದ್, ಘೃಷ್ಣೇಶ್ವರ, ನಾಸಿಕ್, ತ್ರಿಯಂಬಕ್, ಶಿರಡಿ, ಶನಿಸಿಂಗನಾಪುರ, ಭೀಮಾಶಂಕರ್

VIVEKA PRABHA (KANNADA MONTHLY)
April 2014, Vol. 15, No. 04, No. of pages : 44
Registered With Registrar of News Papers of India under 72356/2000.Postal Regn.No.KA/SK/MYS/480/2012-14. LICENSED TO POST W.P.P.AT YADAVAGIRI, MYSORE 570 020,VIDE LICENSE NO.SK/WPP/MYS/155/2013-15.









ಬೆಂಗಳೂರಿನಿಂದ ಪಶ್ಚಿಮಕ್ಕೆ 125 ಕಿಮೀ ದೂರದಲ್ಲಿ ಮಾದಿಹಳ್ಳಿಯ 60 ಎಕರೆಯಷ್ಟು ವಿಶಾಲವಾದ ಪ್ರಶಾಂತ ತಪೋಭೂಮಿಯಲ್ಲಿ ಸ್ವಾಮಿ ಓಂಕಾರಾನಂದಜೀ ಅವರು 1983ರಲ್ಲಿ ಸ್ಥಾಪಿಸಿರುವ ಬದರಿಕಾಶ್ರಮವು ನೀಡುತ್ತಿರುವ ಹಲವು ಸಮಾಜಮುಖಿ ಸೇವೆಗಳು ಕೆಳಕಂಡಂತಿವೆ.

- ಶ್ರೀ ರಾಮಕೃಷ್ಣರ, ಶ್ರೀ ಮಾತೆ ಶಾರದಾದೇವಿ ಮತ್ತು ಶ್ರೀ ಲಕ್ಷ್ಮೀನಾರಾಯಣರ ಅಮೃತಶಿಲೆಯ ಮೂರ್ತಿಗಳನ್ನು ಪ್ರತಿಷ್ಠಾಪಿಸಿರುವ ಪ್ರಶಾಂತ ಧ್ಯಾನಮಂದಿರ.
- ಬದರಿಕಾಶ್ರಮ ವಿದ್ಯಾಶಾಲೆ ( ಸು. 5000 ಚದುರ ಅಡಿ ವಿಸ್ತೀರ್ಣದ ಸುಸಜ್ಜಿತ ಕಟ್ಟಡದಲ್ಲಿ 600 ವಿದ್ಯಾರ್ಥಿಗಳು ಎಲ್‌ಕೆಜಿ ಯಿಂದ 5ನೇ ತರಗತಿವರೆಗೆ ವ್ಯಾಸಂಗ ಮಾಡುತ್ತಿದ್ದಾರೆ).
- ಸುಸಜ್ಜಿತವಾದ ಅತಿಥಿಗೃಹಗಳು, ಶಿಕ್ಷಕರಿಗೆ ವಸತಿಗೃಹಗಳು
- ಸ್ವಾಮಿ ವಿವೇಕಾನಂದರ ಬೃಹತ್ ಕಂಚಿನ ಪ್ರತಿಮೆ.
- ಸನ್ಯಾಸಿ ನಿವಾಸಗಳು, ಗೋಶಾಲೆ.
- ಗ್ರಂಥಾಲಯ, ಕಂಪ್ಯೂಟರ್ ತರಬೇತಿ ಕೇಂದ್ರ, ಆಟದ ಮೈದಾನ.
- ಗ್ರಾಮೀಣ ಪ್ರದೇಶದ ಬಡ ಮಕ್ಕಳಿಗೆ ಉಚಿತ ವಿದ್ಯಾರ್ಥಿನಿಲಯ, ಮಧ್ಯಾಹ್ನದ ಭೋಜನ.
- ಶಿಕ್ಷಕರ ಪುನಶ್ಚೇತನ ಶಿಬಿರ, ಯುವಜನ ಜಾಗೃತಿ, ವ್ಯಕ್ತಿತ್ವ ವಿಕಸನ ಕಾರ್ಯಕ್ರಮಗಳು
- ಉಚಿತ ವೈದ್ಯಕೀಯ ಶಿಬಿರಗಳು.
- ನಾಡಿನ ಶ್ರೇಷ್ಠ ವಿದ್ವಾಂಸರು, ಸಂತರಿಂದ ಸತ್ಸಂಗ ಕಾರ್ಯಕ್ರಮಗಳು.

**ಆಶ್ರಮದಲ್ಲಿ ಸ್ವಯಿಚ್ಛೆಯಿಂದ ಸೇವೆ ಸಲ್ಲಿಸುವ ನಿಸ್ವಾರ್ಥ ಸೇವಾಮನೋಭಾವದ ಯುವಕರಿಗೆ ಮತ್ತು ನಿವೃತ್ತ ನೌಕರರಿಗೆ ಮುಕ್ತ ಅವಕಾಶವಿದೆ.**

ಆಶ್ರಮದ ಎಲ್ಲ ಅಭಿವೃದ್ಧಿ ಕಾರ್ಯಗಳು ಜನತೆಗೆ ತಲುಪಿ ಇದನ್ನೊಂದು ಜನಕಲ್ಯಾಣ ಕೇಂದ್ರವನ್ನಾಗಿ ಮಾಡುವ ಸ್ವಾಮೀಜಿ ಅವರ ಸಂಕಲ್ಪವು ಪೂರ್ಣಗೊಳ್ಳಲು ತಮ್ಮಗಳ ತನು ಮನ ಧನ ಸಹಾಯದ ಅವಶ್ಯಕತೆಯಿದೆ. ತಮ್ಮ ಉದಾರವಾದ ನೆರವಿಗೆ ಸರ್ಕಾರದ 80ಜಿ ಮೂಲಕ ತೆರಿಗೆ ವಿನಾಯಿತಿ ದೊರೆಯುತ್ತದೆ.

Badarikashrama, a spiritual and cultural centre, having a branch in California,USA, is looking for qualified teachers for its primary and higher primary at Madihalli PO, Turuvekere Tq., Tumkur Dt. 572227.

Passion for teaching,B.Ed/D.Ed, degrees, fluency in spoken and written English is a must.

Experience in CBSE/ICSC curriculum, stress in Fine Arts, will add merit.

On request, if needed, boarding and lodging provided.

Badarikashrama Vidyashala is a progressive school with curriculum based on the educational philosophy of Swami Vivekananda.

The ashrama is in a serene, spiritual, environment, perfect for teachers to impart knowledge to students and inspire their creative minds.

Those interested in teaching in a spiritual environment focusing on the life and teachings of Sri Ramakrishna, Sri Sarada Devi, and Swami Vivekananda are encouraged to apply.

**Contact:**

08139-287571/287012, Mobile: 8762232112, email: badarik@sify.comContact: 08139-287571/287012, Mobile: 8762232112, email: badarik@sify.com



# ಬದರಿಕಾಶ್ರಮ

ಮಾದಿಹಳ್ಳಿ, ತುರುವೇಕೆರೆ ತಾ|| ತುಮಕೂರು ಜಿಲ್ಲೆ – 572227

**Email : badarik@sify.com Website : www.badarikashrama.org**
**Ph: 08139 - 287571**